ಅಧ್ಯಾತ್ಮಗ್ರಂಥಾವಳಿ

# ಅಧ್ಯಾತ್ಮಗೀತಾವ

ಲೇಖಕರು :

ಶ್ರೀ ಸಚ್ಚಿದಾನಂದೇಂದ್ರಸರಸ್ವತೀಸ್ವಾಮಿಗಳವರು

ಕ್ರಮಾಂಕ ೩೧

ಪ್ರಕಾಶಕರು :

ಅಧ್ಯಾತ್ಮಪ್ರಕಾಶಕಾರ್ಯಾಲಯ

ಹೊಳೆನರಸೀಪುರ

1996

# ಮುನ್ನುಡಿ

ಶ್ರೀ ಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿಗಳವರು ತಮ್ಮ ಪೂರ್ವಾಶ್ರಮದಲ್ಲಿ ರಚಿಸಿದ ಕೆಲವು ಆಧ್ಯಾತ್ಮವಿಚಾರಬೋಧಕವಾದ ಹಾಡುಗಳು "ಅಧ್ಯಾತ್ಮಗೀತಾವಳಿ" ಎಂಬ ಹೆಸರಿನಿಂದ ಮೊದಲಬಾರಿಗೆ 1927 ರಲ್ಲಿ ಪ್ರಕಟವಾಯಿತು. ಆಗಿನ ಕಾಲಕ್ಕೆ ಹೊಸದಾಗಿ ಶ್ರೀಶ್ರೀಗಳವರು ನಡೆಯಿಸುತ್ತಿದ್ದ "ಶಂಕರಸಪ್ತಾಹ" ವೆಂಬ ಶ್ರೀಶಂಕರಾಚಾರ್ಯರ ಜಯಂತೀ ಹಾಗೂ ಪಕ್ಕವಾದ್ಯಸಹಿತವಾಗಿ ದಿ|| ಕೆ. ರಾಮಣ್ಣದಾಸರು, ದಿ|| ಡಿ. ಸಿ. ನಂಜಪ್ಪಭಾಗವತರು ದಿ|| ವಿಶ್ವೇಶ್ವರಭಾಗವತರು–ಇವರುಗಳು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಬಹಳ ವರ್ಷಗಳ ಅನಂತರ ಹಾಡುವವರು ಒಬ್ಬೊಬ್ಬರಾಗಿ ದಿವಂಗತರಾದಮೇಲೆ ಈ ಸಂಗೀತಕಾರ್ಯಕ್ರಮವು ನಿಂತುಹೋಯಿತು. ಆದರೂ ಜನರು ಈ ಗ್ರಂಥವನ್ನು ಮಾತ್ರ ಅಪೇಕ್ಷಿಸುತ್ತಿದ್ದರು.

ಮತ್ತೆ 1964 ರಲ್ಲಿ ಇದೇ ಗ್ರಂಥವನ್ನು ಶ್ರೀಶ್ರೀಗಳವರು ಹಿಂದೆಯೇ ರಚಿಸಿದ್ದ ಮತ್ತೂ ಕೆಲವು ಹಾಡುಗಳನ್ನು ಸೇರಿಸಿ ಅಗ್ಗೆ ಕೃತಿಗಳ ಸಂಖ್ಯೆಯನ್ನು ೮೧ ಕ್ಕೆ ಏರಿಸಿ ಪ್ರತಿ ಹಾಡಿಗೂ ಅರ್ಥವಿವರಣೆಗಾಗಿ ಸೂಕ್ತವಾದ ಟಿಪ್ಪಣಿಗಳನ್ನು ಸೇರಿಸಿ ಎರಡನೆಯ ಸಂಸ್ಕರಣವನ್ನು ಹೊರತರಲಾಯಿತು. ಇದುಕೂಡ ಜನಪ್ರಿಯವಾಗಿದ್ದು ಈಗ್ಗೆ ಮೂರು ವರ್ಷಗಳ ಹಿಂದೆ ಪ್ರತಿಗಳೆಲ್ಲ ಮಾರಾಟವಾಗಿಬಿಟ್ಟಿತು. ಈ ವೇಳೆಗೆ ಶ್ರೀಶ್ರೀಗಳವರು ಬ್ರಹ್ಮೀಭೂತರಾಗಿ ಹತ್ತು ವರ್ಷಗಳು ಕಳೆದಿದ್ದವು.

ಅನಂತರ ಈ ಗ್ರಂಥದ ಮೂರನೆಯ ಸಂಸ್ಕರಣವನ್ನು ಹೊರತರಲು 1987 ರಲ್ಲಿ ಪ್ರಯತ್ನಿಸಲಾಯಿತು. ಶ್ರೀಶ್ರೀಗಳವರು ಸಂನ್ಯಾಸಸ್ವೀಕಾರ ಮಾಡಿದ ಅನಂತರ ಶ್ರೀರಾಮದೇವರನ್ನು ಕುರಿತು ರಚಿಸಿದ್ದ 'ಸಚ್ಚಿದಾನಂದ' ಎಂಬ ಅಂಕಿತವುಳ್ಳ ಕೆಲವು ಹಾಡುಗಳು "ಅಧ್ಯಾತ್ಮಪ್ರಕಾಶ" ಮಾಸಪತ್ರಿಕೆಯ ಹಳೆಯ ಸಂಚಿಕೆಗಳಲ್ಲಿ ಅಲ್ಲಲ್ಲಿ ಪ್ರಕಟವಾಗಿದ್ದವು. ಅವುಗಳಲ್ಲಿ ಕೆಲವನ್ನು ಶ್ರೀಶ್ರೀಗಳವರ ಭಕ್ತರು ಬಹಳ ಶ್ರದ್ಧೆಯಿಂದ ನಿತ್ಯಭಜನೆಯಲ್ಲಿ ಹಾಡಿಕೊಳ್ಳುತ್ತಿದ್ದರು. ಅವುಗಳನ್ನು ಮೂರನೆಯ ಸಂಸ್ಕರಣದಲ್ಲಿ ಅಳವಡಿಸಬೇಕೆಂದು ಯೋಚಿಸಿ ಸಂಗ್ರಹಿಸಿ ಪರಿಶಿಷ್ಟವಾಗಿ ಕೊಡಲಾಗಿತ್ತು.

ಶ್ರೀಶ್ರೀಗಳವರು ರಚಿಸಿದ ಇನ್ನೂ ಅನೇಕ ಕೃತಿಗಳು ಹಿಂದಿನ ಅಧ್ಯಾತ್ಮ ಪ್ರಕಾಶ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದರೂ ಈ ಗ್ರಂಥದಲ್ಲಿ ಅವುಗಳನ್ನು ಸೇರಿಸಲಾಗಿರಲಿಲ್ಲ. ಅಲ್ಲದೆ ಅಜ್ಞಾತಕರ್ತೃಕಗಳಾದ ಅನೇಕ ಕೃತಿಗಳನ್ನೂ ಹಳೆಯ ಪತ್ರಿಕೆಗಳಲ್ಲಿ 'ಸಂಕಲಿತ' ಎಂಬ ಹೆಸರಿನಿಂದ ಪ್ರಕಟಿಸಲಾಗಿತ್ತು. ಅಂತಹ ಕೃತಿಗಳನ್ನೆಲ್ಲವನ್ನೂ ಗ್ರಂಥರೂಪದಿಂದ ಸಂಗ್ರಹಿಸಬೇಕೆಂಬ ಯೋಜನೆಯು ಶ್ರೀಶ್ರೀಗಳವರಿಗಿತ್ತು. ಈಚೆಗೆ

ನಮ್ಮ ಮತ್ತೂರು ಶಾಖಾಕಾರ್ಯಾಲಯದ ಪಂಡಿತರಾದ ಬ್ರ. ಶ್ರೀ ಕೇಶವ ಅವಧಾನಿಗಳು ಆ ಕೃತಿಗಳನ್ನೆಲ್ಲ ಸಂಗ್ರಹಿಸಿ ಅಧ್ಯಾತ್ಮಗೀತಾವಳಿಯ ಕೊನೆಯಲ್ಲಿ ಕೊಡೋಣವೆಂದು ಸಲಹೆಮಾಡಿದರು. ಅವರ ಪ್ರಯತ್ನ ಹಾಗೂ ಸಲಹೆಗಳಿಗನುಸಾರವಾಗಿ ಅವುಗಳನ್ನೂ ಈ ಸಂಪುಟದಲ್ಲಿ ಸೇರಿಸಿದ್ದೇವೆ 1-126 ರವರೆಗಿನ ಹಾಗೂ 136-142 ಈ ಪದ್ಯಗಳೆಲ್ಲವೂ ಶ್ರೀಶ್ರೀಸದ್ಗುರು ಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳವರಿಂದ ಪೂರ್ವಾಶ್ರಮ ಹಾಗೂ ಸಂನ್ಯಾಸಾಶ್ರಮ ಸ್ವೀಕಾರಾನಂತರ ರಚಿತವಾದ ಕೃತಿಗಳಾಗಿವೆ. 127-130 ರವರೆಗಿನ ಪದ್ಯಗಳು ನಂಜಪ್ಪ ಭಾಗವತರ ಕೃತಿಗಳು 131-141ರ ವರೆಗಿನ ಕೃತಿಗಳೆಲ್ಲವೂ ಅಜ್ಞಾತಕರ್ತೃಕ ಕೃತಿಗಳಾಗಿದ್ದು ಜಿಜ್ಞಾಸುಗಳಿಗೋಸ್ಕರ ಸಂಗ್ರಹಿಸಲ್ಪಟ್ಟಿವೆ. ಹೀಗೆ ನಾಲ್ಕನೆಯ ಸಂಸ್ಕರಣವು ಉಳಿದಮೂರಕ್ಕಿಂತ ಹೆಚ್ಚು ಉಪಯುಕ್ತವಾಗಿದೆ.

ಪೂಜ್ಯ ಶ್ರೀಗಳವರು ಬೋಧಿಸುತ್ತಿದ್ದ ಸರಳ ಶಂಕರವೇದಾಂತಪ್ರಕ್ರಿಯೆಯ ಮರ್ಮವನ್ನೆಲ್ಲ ಹಾಡುಗಳ ರೂಪದಿಂದಲೇ ಇಲ್ಲಿ ಅಳವಡಿಸಲಾಗಿದೆ. ಆದ್ದರಿಂದ ಇದು ದಾಸಸಾಹಿತ್ಯದಂತೆ ಸುಲಭಶೈಲಿಯಲ್ಲಿಲ್ಲ. ಆದರೆ ಅರ್ಥಗರ್ಭಿತವಾಗಿದ್ದು ಶಾಂಕರ ವೇದಾಂತಪ್ರಕ್ರಿಯಾನುಸಂಧಾನವನ್ನು ಸಂಗೀತದ ಮಾಧ್ಯಮದಿಂದ ಮಾಡಿಕೊಳ್ಳಲು ಅನುಕೂಲವಾಗಿದೆ. ಒಂದೊಂದು ಹಾಡಿನ ಅಭಿಪ್ರಾಯವನ್ನೇ ವಿವರಿಸುತ್ತಾ ಹೋದಲ್ಲಿ ಒಂದೊಂದು ಉಪನ್ಯಾಸವನ್ನೇ ಮಾಡುವಷ್ಟು ಬಂಡವಾಳವುಳ್ಳದ್ದಾಗಿದೆ. ಹೀಗೆ ಜ್ಞಾನ ಭಕ್ತಿಗಳ ಸಂಗಮವುಳ್ಳ ಈ ಕೃತಿಗಳನ್ನು ಅಧ್ಯಾತ್ಮವಿದ್ಯಾಪ್ರೇಮಿಗಳ ಉಪಯೋಗಕ್ಕಾಗಿ ಈಗ ಪ್ರಕಟಿಸಲಾಗಿದೆ.

ಮಹಾಜನರು ಈ ಹಾಡಿನ ಪುಸ್ತಕವನ್ನು ಎಲ್ಲ ಅಧ್ಯಾತ್ಮಗ್ರಂಥಗಳಂತೆಯೇ ಆದರದಿಂದ ಬರಮಾಡಿಕೊಂಡು ಪ್ರೋತ್ಸಾಹಿಸಬೇಕಾಗಿ ಪ್ರಾರ್ಥನೆ.

ಇತಿ-

ಸಜ್ಜನವಿಧೇಯ,

ತಾ|| 11-8-96 ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ,

ಹೊಳೆನರಸೀಪುರ. ಅಧ್ಯಾತ್ಮಗ್ರಂಥಾವಳಿಯ ಸಂಪಾದಕ.

ಓಂ

# ಅಧ್ಯಾತ್ಮಗೀತಾವಳಿ

## ಗಣಪತಿ ನೀನಿಹಪರಗತಿ

**ಕಲ್ಯಾಣಿ** **ರೂಪಕ**

ಗಣಪತೀ, ನೀನಿಹಪರಗತಿ ॥ ಪ ॥

ತಂದೆ ತಾಯಿ ನೀನೆ । ಬಂಧು ಬಳಗ ನೀನೆ ॥
ಹಿಂದೆ ಬರುವ ಧರ್ಮಾಧರ್ಮವ । ಚಂದದಿ ಬೋಧಿಪ ನೀನೇ । ಸಿಂಧುರಾಸ್ಯ ॥ ೧ ॥

ಸರ್ವಕಾರ್ಯಕರ್ತ । ಸರ್ವಫಲದ ಭೋಕ್ತ ॥
ಸರ್ವಕರ್ಮಫಲ ಸಂಯೋಜನೆ । ಗೋರ್ವನೆ ನೀನಹೆ ಶಕ್ತ । ಶರ್ವತನಯ ॥ ೨ ॥

ಅರ್ಥಕಾಮಮೂಲ ಸ । ರ್ವಾರ್ಥದಾನಲೋಲ ॥
ಅರ್ಥಿಯಿಂದ ಧ್ಯಾನಿಸೆ ಪರ । ಮಾರ್ಥವ ತೋರುವ ಲೀಲಾ । ಸಾರ್ಥಮೂರ್ತಿ ॥ ೩ ॥

ಬುದ್ಧಿಸಿದ್ಧಿಗೀಶ । ಪರಿ । ಶುದ್ಧಬುದ್ಧವೇಷ ॥
ಶುದ್ಧಚಿತ್ತಭಕ್ತಿಗಮ್ಯ । ಚಂ । ದ್ರಾರ್ಧಭೂಷ ಹೃತದೋಷ । ಸಿದ್ಧಭಾಷ ॥ ೪ ॥

ಶಂಕರಸ್ವರೂಪ । ನತ । ಕಿಂಕರಾರ್ತಿಹ, ಪಾ ॥
ಶಾಂಕುಶಧರ ಮೋದಕಾಭ । ಯಂಕರಹಸ್ತನೆ, ತಾಪಾ । ತಂಕಶಮನ ॥ ೫ ॥

[ಸಿಂಧುರಾಸ್ಯ–ಆನೆಯ ಮುಖದವನೆ; ಸರ್ವಕಾರ್ಯಕರ್ತ–ಎಲ್ಲ ಕ್ರಿಯೆಗಳನ್ನೂ ಮಾಡಿಸುವವನು, ಫಲಸಂಯೋಜನೆ–ಫಲವನ್ನು ಕೂಡಿಸುವವನು; ಶರ್ವತನಯ–ಶಿವನ ಮಗನೆ; ಅರ್ಥಿಯಿಂದ–ಪ್ರೀತಿಯಿಂದ, ಭಕ್ತಿಯಿಂದ; ಲೀಲಾಸಾರ್ಥಮೂರ್ತಿ–ಲೀಲೆಗಳ ಸಾಲುಗಳ ಆಕಾರದವನೆ; ಬುದ್ಧವೇಷ–ಚೈತನ್ಯರೂಪನೆ; ಶುದ್ಧ

ಚಿತ್ತಬುದ್ಧಿಗಮ್ಯ–ನಿರ್ಮಲವಾದ ಚಿತ್ತದ ಭಕ್ತಿಗೆ ತಿಳಿಯಬರುವವನೆ; ಚಂದ್ರಾರ್ಧ ಭೂಷ–ಬಾಲಚಂದ್ರಾಲಂಕೃತನೆ; ಹೃತದೋಷ–ಯಾವ ದೋಷವೂ ಇಲ್ಲದವನೆ; ಸಿದ್ಧಭಾಷ–ಆಡಿದ ಮಾತಿನಂತೆ ಕಾರ್ಯವು ಆಗುವಂಥವನೆ; ಶಂಕರಸ್ವರೂಪ – ಮಂಗಳಾಕಾರನೆ; ನತಕಿಂಕರಾರ್ತಿಹ–ನಮಸ್ಕರಿಸಿದವರ ಸಂಕಟವನ್ನು ಹೋಗಲಾಡಿಸು ವವನೆ; ತಾಪಾತಂಕಶಮನ–ತಾಪತ್ರಯವೆಂಬ ಅಡ್ಡಿಯನ್ನು ನಾಶಮಾಡುವವನೆ.]

## ಕರುಣಿಸುತೆ ಕಾಯೆ

**ಹಿಂದೂಸ್ಥಾನಿ ಕಾಪಿ (ಬಾರೋ ಮುರಾರಿ) ಆದಿತಾಳ**

ಕರುಣಿಸುತೆ ಕಾಯೆ । ಕಮಲಜನ ಜಾಯೆ ॥ ಪ ॥

ಚಿರತರಾಮ್ನಾಯೇ । ಡಿತಚರಣೆ ತಾಯೆ ॥ ಅ ॥

ಸುಖಸಂವಿದಾತತೇ । ನಿಖಿಲೇಪ್ಸಿತಾಕೃತೇ ॥
ಮುಖರಿತಮೂಕಸ । ಮ್ಮುಖ ವಿಮಲಕೀರ್ತೇ ॥ ೧ ॥

ಮತಿಕರಣಚೋದನೆ । ಮತಿದೋಷನೋದನೆ ॥
ಮತಿಜನಿಮೃತಿಸದನೇ ಮ । ನ್ಮತಿಗೆ ಮಂಗಲಗತಿಯೊಂದನೆ ॥ ೨ ॥

ಅರಿದಗೆ ಸುದೂರೇ । ಅರಿಯದಗೆ ನೀ ನೆರೆ ॥
ಅರಿವಿಗರಿವು ನೀನಿರವಿಗಿರವು । ಪರತರೆ ಶಂಕರೆ ಪೊರೆದು ॥ ೩ ॥

[ಚಿರತರಾಮ್ನಾಯೇಡಿತಚರಣೆ–ಅನಾದಿವೇದದಿಂದ ಸ್ತುತಿಸಲ್ಪಟ್ಟ ಪಾದಗಳುಳ್ಳ ವಳೆ. ಸುಖಸಂವಿದಾತತೇ–ಆನಂದಜ್ಞಾನಗಳಿಂದ ವ್ಯಾಪ್ತಳೆ. ನಿಖಿಲೇಪ್ಸಿತಾಕೃತೇ– ಇಷ್ಟಗಳೆಲ್ಲದರ ರೂಪುಳ್ಳವಳೆ. ಮತಿಕರಣಚೋದನೇ–ಬುದ್ಧಿಯನ್ನೂ ಇಂದ್ರಿಯ ಗಳನ್ನೂ ತಮ್ಮತಮ್ಮ ವ್ಯಾಪಾರದಲ್ಲಿ ತೊಡಗುವಂತೆ ಮಾಡುವಾಕೆಯೆ. ಮತಿ ದೋಷನೋದನೆ–ಅಂತಃಕರಣದ ದೋಷಗಳನ್ನೆಲ್ಲ ಕಳೆಯುವವಳೆ. ಮತಿಜನಿಮೃತಿ ಸದನೆ–ಮನಸ್ಸು ಹುಟ್ಟಿ ಅಡಗುವ ಸ್ಥಾನವೆ. ಅರಿದಗೆ ಸುದೂರೆ–ತಿಳಿದೆನೆನ್ನುವವನಿಗೆ ಬಲುದೂರದಲ್ಲಿರುವವಳೆ. ಅರಿಯದಗೆ ನೀ ನೆರೆ–ತಿಳಿಯಲಾರೆನೆನ್ನುವವನಿಗೆ ತೀರ ಹತ್ತಿರವಾಗಿ ಅವನ ಆತ್ಮನೇ ಆಗಿರುವವಳು. ಅರಿವಿಗರಿವು–ಇಂದ್ರಿಯಗಳ ಮತ್ತು ಮನಸ್ಸಿನ ಅರಿವಿಗೂ ಮೂಲವಾಗಿರುವ ಚೈತನ್ಯ. ಇರವಿಗಿರವು–ವ್ಯವಹಾರದಲ್ಲಿ ಇದೆ ಎಂದು ಕಾಣುವ ವಸ್ತುಗಳ ಇರವಿನ ಮೂಲವಾದ ಸದ್ಬ್ರಹ್ಮ. ಈ ಪದದಲ್ಲಿ ಸರಸ್ವತಿ ಎಂಬ ಹೆಸರಿನಿಂದ ಪರಮಾತ್ಮತತ್ತ್ವವನ್ನೇ ಹೇಳಿರುತ್ತದೆ.]

# ಹಸೆಗೆ ಕರೆಯುವ ಹಾಡು

## ("ವರವಜ್ರಮಯದ ಮಂಟಪವ ಶೃಂಗರಿಸಿ" ಎಂಬಂತೆ)

**ಕಾಂಬೋಧಿ** **ಆದಿತಾಳ**

ಸತ್ಯಸಂವಿನ್ಮಯ ಮೂರ್ತಿಯೆ ಬಾರೆ ।
ನಿತ್ಯನಿರಂಜನ ಕೀರ್ತಿಯೆ ಬಾರೆ ।
ಸ್ತುತ್ಯಳೆ ಶಮಿತಾಘಾರ್ತಿಯೆ ಬಾರೆ ।
ಭೃತ್ಯ ಹೃತ್ಸಾರಸವರ್ತಿಯೆ ಬಾರೆಂದು
ಚಿತ್ತಿನಿಯರು ಹಸೆಗೆ ಕರೆದರು । ॥ ೧ ॥

ಸಗುಣನಿರ್ಗುಣ ಪರಧಾತುವೆ ಬಾರೆ ।
ಜಗದಜನ್ಮಾದಿಗೆ ಹೇತುವೆ ಬಾರೆ ।
ಅಗಣಿತಗುಣಗಣ ಕೇತುವೆ ಬಾರೆ ।
ಭಗವತಿ ಭಕ್ತಜೀವಾತುವೆ ಬಾರೆಂದು
ಮುಗುದೆಯರು ಹಸೆಗೆ ಕರೆದರು । ॥ ೨ ॥

ಮೂಲಾಧಾರಾದಿ ಷಣ್ನಿಲಯೆ ನೀಬಾರೆ ।
ಕಾಲದೇಶಾದಿ ಸಂಪ್ರಲಯೆ ನೀಬಾರೆ ।
ಲೀಲಾವಿಗ್ರಹ ಕಾಂತಿವಲಯೆ ನೀಬಾರೆ ।
ಲೋಲಾಲಕೆ ಜಗನಲಿಯೆ ನೀಬಾರೆಂದು
ಬಾಲೆಯರು ಹಸೆಗೆ ಕರೆದರು । ॥ ೩ ॥

ಶಿಶಿರ ಗಿರೀಶನ ಶಿರಿಯೆ ನೀಬಾರೆ ।
ಶಶಿಶೇಖರನ ಪ್ರೇಮಝರಿಯೆ ನೀಬಾರೆ ।
ಕುಸುಮಶರನ ಪಿಡಿಮರಿಯೆ ನೀಬಾರೆ ।
ವಶಿಜನಮೋದದ ಸೆರೆಯೆ ನೀಬಾರೆಂದು
ಶಶಿಮುಖಿಯರು ಹಸೆಗೆ ಕರೆದರು । ॥ ೪ ॥

ಪರೆ ವಿಶ್ವತೈಜಸಪ್ರಾಜ್ಞಳೆ ಬಾರೆ ।
ತುರೀಯಾತೀತಸಂಜ್ಞಳೆ ಬಾರೆ ।
ಉರುಮಾಯೆ ಕ್ಷೇತ್ರಕ್ಷೇತ್ರಜ್ಞಳೆ ಬಾರೆ ।
ಗರಪುರಪತಿ ಭಾವಜ್ಞಳೆ ಬಾರೆಂದು ।
ತರುಣಿಯರು ಹಸೆಗೆ ಕರೆದರು । ॥ ೫ ॥

## ಮಂಗಲ ಶುಭ ಮಂಗಲ

**ಚಕ್ರವಾಕ**

ಮಂಗಲ ಶುಭ ಮಂಗಲ ॥ ಪ ॥
ಮಂಗಲ ದೇವಿಗೆ ಮಂಗಲಾತುಮಳಿಗೆ ॥ ಅ ಪ ॥

ಜಗವೆಲ್ಲವ ಪೆತ್ತ ಜನನಿಗೆ ಮಂಗಲ । ನಗುತ ಪೋಷಿಸುವ ನಾಥೆಗೆ ಮಂಗಲ ॥
ಮಗುಳೆ ಸಂಹರಿಸುವ ಮಾಯೆಗೆ ಮಂಗಲ । ತ್ರಿಗುಣ ವಿಕಾರಾತೀತೆಗೆ ಮಂಗಲ ॥ ೧ ॥

ವೇದಾಗಮನಿಷ್ಠವೇದ್ಯೆಗೆ ಮಂಗಲ । ವಾದವಿದೂರೆ ವಾಣಿಗೆ ಮಂಗಲ ॥
ಮೋದ ಪ್ರಮೋದ ಸಮ್ಮೋದೆಗೆ ಮಂಗಲ । ಭೇದರಹಿತಬ್ರಹ್ಮಾಣಿಗೆ ಮಂಗಲ ॥ ೨ ॥

ವಾಮಕರಾತ್ತಸುವೀಣೆಗೆ ಮಂಗಲ । ಸಾಮಗೇಯೆಗೆ ಸೌಖ್ಯದೆಗೆ ಮಂಗಲ ॥ ೩ ॥

ತಾಮಸಗುಣವ ತವಿಪಳಿಗೆ ಮಂಗಲ । ಸೌಮನಸ್ಯೆಗೆ ಶಂಕರಿಗೆ ಮಂಗಲ ॥ ೪ ॥

## ಗುರುವರ್ಯ ಪೊರೆಯೆನ್ನ

**ಮುಖಾರಿ** **ಆದಿತಾಳ**

ಗುರುವರ್ಯ ಪೊರೆಯೆನ್ನ । ಕರುಣದಿಂ ನೋಡಿ ॥ ಪ ॥
ಮರೆಯೆನ್ನ ಅಪರಾಧ । ಚರಣವ ಪಿಡಿವೆ ॥ ಅ ॥

ಎಲ್ಲಿಂದ ಬಂದುದೀ । ಇಲ್ಲದ ಮಾಯೆ ।
ಸಲ್ಲದ ಕಾರ್ಯವ । ನೆಲ್ಲ ಗೈಸಿದುದು ॥ ೧

ನಿನ್ನ ಬೋಧೆಯ ಮೀರು । ತನ್ನವ ಭಜಿಸಿ ।
ಕುನ್ನಿಯಾದೆನು ದೇವ । ಮನ್ನಿಸೀ ತಪ್ಪ ॥ ೨ ॥

ಮನೆ ಮಾರು ಧನವೆಂದು । ತನಯರಿವರೆಂದು ।
ಕನಸ ನಾ ನಿಜವೆಂದೆ । ನೆನೆಸಿದೆನಯ್ಯೋ ॥ ೩ ॥

ನಿತ್ಯಾನಂದನು ನೀನು । ಮರ್ತ್ಯನಲ್ಲೆಂಬ ।
ಸತ್ಯೋಪದೇಶವ । ನೊತ್ತರಿಸಿದೆನು ॥ ೪ ॥

ಪರಿಪರಿ ಬಳಲಿ ಸಂ । ಸರಣನಾರಕದಿ ।
ಕೊರಗಿ ಬಂದಿಹೆನೈ ಶಂ । ಕರನೇ ಶರಣೆಂದು ॥ ೫ ॥

[ಮರ್ತ್ಯ–ಸಾವುಳ್ಳ ಮನುಷ್ಯ ಒತ್ತರಿಸಿದೆನು–ಬದಿಗಿಟ್ಟೆನು, ಅಲಕ್ಷ್ಯ ಮಾಡಿದೆನು]

## ಗೆಲವು ಶ್ರೀ ಗುರುರಾಯ

**ನಾಟಿ** **ಝಂಪೆ**

ಗೆಲವು ನಿನಗೆ ॥ ಪ ॥

ಗೆಲವು ಶ್ರೀ ಗುರುರಾಯ । ಗೆಲವು ನಿರ್ಜಿತಮಾಯ ।
ಗೆಲವು ಲೀಲಾಕಾಯ । ಗೆಲವಪ್ರಮೇಯ ॥ ಅ ॥

ಗೆಲವು ನಿರ್ಗುಣಸಗುಣ । ಗಳನು ಮೀರಿದ ಜಾಣ ।
ಗೆಲವು ಶಾಂತ್ಯಾಭರಣ । ಶಿವಗುರು ಪ್ರಾಣ ॥ ೧ ॥

ಗೆಲವು ಬ್ರಹ್ಮಾನಂದ । ಜಲಧಿಯೊಳು ಮಿಗೆ ನಿಂದ ।
ಗೆಲವು ಗುರುಗೋವಿಂದ । ರೊಲುಮೆಯಕ್ಕಂದ ॥ ೨ ॥

ಗೆಲವು ಭಾಷ್ಯಾಶ್ಚರ್ಯ । ಕಲನಕೌಶಲಧುರ್ಯ
ಗೆಲವು ದೇಶಿಕವರ್ಯ । ಶಂಕರಾಚಾರ್ಯ ॥ ೩ ॥

[ಲೀಲಾಕಾಯ—ಲೋಕಾನುಗ್ರಹಾರ್ಥವಾಗಿ ಶರೀರವನ್ನು ಗ್ರಹಣ ಮಾಡಿದಂತೆ ತೋರುವವನು. ಅಪ್ರಮೇಯ—ಯಾವ ಪ್ರಮಾಣಗಳಿಗೂ ನಿಲುಕದ ಚೈತನ್ಯ ಸ್ವರೂಪನು. ನಿರ್ಗುಣಸಗುಣಗಳನು ಮೀರಿದ—ಗುಣಗಳು ಮಾಯಾಕೃತವಾಗಿರು ವುದರಿಂದಲೂ ನಿರ್ಗುಣವೆಂಬ ಶಬ್ದವನ್ನು ಗುಣಗಳಿಲ್ಲದವನು ಎಂಬರ್ಥದಲ್ಲಿ ಮಾತ್ರ ಪ್ರಯೋಗಿಸಿರುವದರಿಂದಲೂ ನಿರ್ಗುಣನೂ ಅಲ್ಲ. ಸಗುಣನೂ ಅಲ್ಲ. ಶಿವ ಗುರುಪ್ರಾಣ—ಶಿವಗುರುವೆಂಬ ತಂದೆಗೆ ಅತ್ಯಂತಪ್ರಿಯ. ಬ್ರಹ್ಮಾನಂದ ಸ್ವರೂಪವೇ ಆಗಿದ್ದೇನೆಂಬ ಜ್ಞಾನವನ್ನು ಸಂಪಾದಿಸಿದ್ದರಿಂದ ಗುರುಗಳ ಅನುಗ್ರಹವು ನಿಮ್ಮಲ್ಲಿ ಉಕ್ಕಿ ಹರಿಯಿತು—ಎಂದು ವಿನೆಯ ನುಡಿಯ ಅಭಿಪ್ರಾಯ. ಭಾಷ್ಯಾಶ್ಚರ್ಯಕಲನ— ಭಾಷ್ಯವೆಂಬ ಅದ್ಭುತ ಕೃತಿಯನ್ನು ರಚಿಸಿದ್ದು.]

## ಶರಣು ಶಂಕರಗುರುವರೇಣ್ಯನೆ

**ಸೌರಾಷ್ಟ್ರ** **ಝಂಪೆ**

ಶರಣು ಶಂಕರಗುರುವರೇಣ್ಯನೆ । ಶರಣು ಶಮಿಜನಮಾನ್ಯನೆ ।
ಶರಣು ಶರಣರ ಶೋಕಮೋಹಗಳುರಿಗೆ ನೆರೆ ಪರ್ಜನ್ಯನೆ ॥ ೧ ॥

ಶರಣು ಶಿವಗುರುಭಾಗಧೇಯನೆ । ಶರಣು ಸತ್ಯಧ್ಯೇಯನೆ ।
ಶರಣು ಗುರುಗೋವಿಂದರೊಲುಮೆಯ ಪರಮಹಂಸರ ರಾಯನೆ ॥ ೨ ॥

ಶರಣು ವೇದಾಂತಾಂತರಂಗನೆ । ಶರಣು ಸಂಶಯಭಂಗನೆ ।
ಶರಣು ಶುದ್ಧಾದ್ವೈತಗಂಗೆಯ ಸಿರಿಯ ಭಾಷ್ಯತರಂಗನೆ ॥ ೩ ॥

ಶರಣು ಪರಮತಭೇದದಕ್ಷನೆ । ಶರಣು ವೈದಿಕಪಕ್ಷನೆ ।
ಶರಣು ಕರುಣಾಮೃತದ ಕಿರಣಗ । ಳೆರಚುತಿಹ ಸುಕಟಾಕ್ಷನೆ ॥ ೪ ॥

ಶರಣು ಶಾತಿತಸರ್ವಕಾಮನೆ । ಶರಣು ಸ್ವಾತ್ಮಾರಾಮನೆ ।
ಶರಣು ಸಚ್ಚಿದಾನನ್ದಧಾಮನೆ । ಶರಣು ಶಂಕರನಾಮನೆ ॥ ೫ ॥

[ಶಮಿಜನಮಾನ್ಯ—ಯತಿಗಳಿಂದ ಗೌರವಿಸಲ್ಪಟ್ಟವನು. ಶೋಕಮೋಹಗಳುರಿಗೆ ಪರ್ಜನ್ಯ—ಶೋಕಮೋಹಗಳ ತಾಪವನ್ನು ಆರಿಸುವಂತೆ ಶಾಂತಿಯ ಮಳೆಯನ್ನು ಕರೆಯುವವನು. ವೇದಾಂತಾಂತರಂಗ-ವೇದಾಂತದ ಆಶಯವನ್ನು ಅರಿತವನು. ಶಾತಿತ— ಕತ್ತರಿಸಿದ ; ಸ್ವಾತ್ಮಾರಾಮ—ಆತ್ಮನಲ್ಲಿಯೇ ರಮಿಸುತ್ತಿರುವ.]

## ಶಂಕರನೀತ

**ನಾಟಿ** **ಆದಿತಾಳೆ**

ಶಂಕರನೀತ । ಭಯ । ನಾಶಂಕರನೀತ ॥ ಪ ॥
ಶಂಕರನಾನತಕಿಂಕರವ್ರಾತಭ । ಯಂಕರ ಪಾಪಾತಂಕಶಮನ ಪರ ॥

ಬಾಲನಾಗಿಯೆ ಭವಜಾಲವ ತುಂಡಿಸಿ ।
ಮೇಲಹ ಪರಮಹಂಸಾ–ಶ್ರಮವ ॥
ತಾಳುತೆ ಸುಂಟರಗಾಳಿಯು ಪ್ರೋಲುವೀ ।
ಬಾಳನೆಚ್ಚದ ಪರಿಪೇಳಿದ ಸಂಯಮಿ ॥ ೧ ॥

ನಾಡೆ ತತ್ವಾರ್ಥದ ಬೀಡಹ ಯತಿವರ ।
ಗೌಡಗೋವಿಂದರೊಂದೊಲುಮೆಯಲಿ ॥
ಗಾಢಯುಕ್ತಿಗಳನು ಜೋಡಿಸಿ ಶ್ರುತಿಗಳಿ ।
ಗಾಡುಂಬೊಲನೆ ಮಾಡಿದ ಭಾಷ್ಯದ ॥ ೨ ॥

ಎಲ್ಲರು ಶಂಕರರೆಲ್ಲವು ಶಂಕರ ।
ವಿಲ್ಲಿ ನಾನಾತ್ವಮೇನಿಲ್ಲವೆಂದು ।
ಸೊಲ್ಲಿಸಿ ಮೆಚ್ಚಿದ ನಾಲ್ವರು ಶಿಷ್ಯರ ।
ಸಲ್ಲುಪದೇಶಕೆ ನಿಲ್ಲಿಸುತೊಪ್ಪಿದ ॥ ೩ ॥

[ಆನತ–ನಮಸ್ಕರಿಸಿದ ; ಪಾಪಾತಂಕಶಮನ–ಪಾಪದ ಅಂಜಿಕೆಯನ್ನು ಹೋಗಲಾಡಿಸುವ ; ಸಂಯಮಿ–ಜಿತೇಂದ್ರಿಯ, ಯತಿ ; ತತ್ವಾರ್ಥದ ಬೀಡು-ತತ್ವಾರ್ಥವು ನೆಲೆಸಿರುವ ಸ್ಥಳ ; ಒಲುಮೆಯಲಿ–ಅನುಗ್ರಹದಿಂದ, (ಶ್ರುತಿಗಳಿಗೆ) ಆಡುಂಬೊಲ–ಶ್ರುತಿಗಳು ಕ್ರೀಡಿಸುವ ಸ್ಥಳವೆನ್ನುವಂತಿರುವ ಭಾಷ್ಯವನ್ನು ಮಾಡಿದ ; ಸೊಲ್ಲಿಸಿ–ಹೇಳಿ]

## ಶಂಕರ ಗುರುವರ

ಶಂಕರ ಗುರುವರ । ಸಂಕಟದೂರ ।
ಕಿಂಕರ ಭವಾರ್ಣವಾತಂಕಕೆ ಪಾರ ॥ ಪ ॥

ದ್ವೈತ ವಿಮೋಹದ । ಭೂತದ ಮಾಯ–
ಭೀತಿಯನೋಡಿಸಿ ಸ್ಥೈಪಿಡು ಜೀಯ ॥ ೧ ॥

ಇಲ್ಲದ ವಿದ್ಯೆಯು । ಸಲ್ಲದ ಕಾಮು ।
ಘಲ್ಲಿಸಲಿವ ನಿಮ್ಮ । ನಲ್ವಡಿ ಪ್ರೇಮು ॥ ೨ ॥

ಬಿಚ್ಚಿಸೀ ಕರ್ಮದ । ಹೆಚ್ಚಿನ ಗಂಟ ।
ಸಚ್ಚಿದಾನಂದನ ಮೆಚ್ಚಿನ ನಂಟ ॥ ೩ ॥

## ಇವನಾರು ಬಲ್ಲವರು ಪೇಳಿ

**ಮುಖಾರಿ** **ಝಂಪೆ**

ಇವನಾರು ಬಲ್ಲವರು ಪೇಳಿ ।
ಇವನ ಕಂಡರಿಗುಂಟೆ ಜವನವರ ಧಾಳಿ ॥

ಕಾಲಡಿಯೊಳೊಗೆದು ತಾ ಮೇಲಾಗುತೆಲ್ಲರಿಗು ।
ಮೇಲುಕೀಳೆಂಬುದನು ಸುಳ್ಳಾಗಿಸಿ ॥
ಕಾಲವಂಚಕನಾಗಿ ಕೀಲಿಸಿದ ಕಟ್ಟುಗಳ ।
ಮೂಲವನೆ ಮುಟ್ಟದೇ ಮುಂದಿರಿಸಿದ ॥ ೧ ॥

ಲೇಸೆನಿಸಿ ಗುರುವಾಗುತಾ ಸುರೇಶ್ವರಗೆ ಸ್ವ ।
ರ್ವಾಸಕೆಳಸದೆ ಸಕಲ ಭೋಗಗಳಿಗೆ ॥
ಹೇಸಿದುರುವಿರತಿಗಾ ವ್ಯಾಸ ತತ್ಪುತ್ರರೊಂ ।
ದೇ ಸಮನೆ ತಲೆದೂಗೆ ಭಾಸವಡೆದ ॥ ೨ ॥

ನೆರೆ ಸನಂದನಮುಖ್ಯಗುರುವೆನಿಸಿ ಹರಿರೂಪ ।
ದಿರಿಕೆಯನು ವೈಕುಂಠ ಮಾತ್ರಕಿಡದೆ ॥
ಕರತಲಾಮಲಕವೆನೆ ತರಳರುಂ ತರುಣಿಯರು ।
ಮರಿಯೆ ಕಾಣಿಸುತೆ ಶಂಕರನೆನಿಸಿದ ॥ ೩ ॥

[ಕಾಲಡಿಯಲ್ಲಿ (-ಕಾಲಟಿಯಲ್ಲಿ) ಹುಟ್ಟಿ ಎಲ್ಲರಿಗೂ ಮೇಲಾದವನು, ಮೇಲು, ಕೀಳು–ಎಂಬುದೆ ಹುಸಿಯೆನಿಸಿ ತಾರತಮ್ಯವಿಲ್ಲದ ಏಕರೂಪವಾದ ಅದ್ವೈತವನ್ನು ತೋರಿಸಿಕೊಟ್ಟವನು. ಕಾಲವಂಚಕ – ಕಾಲಾತೀತ ಪರಮಾತ್ಮ ಸ್ವರೂಪವನ್ನು

ಹೊಂದಿದವನು ; ಕೀಲಿಸಿದ ಕಟ್ಟುಗಳ ಮೂಲ – ಸಂಸಾರಬಂಧ ಪಾಶಗಳ ಮೂಲ, ಅಜ್ಞಾನ ; ಮುಟ್ಟದೆ ಮುಂದಿರಿಸಿದ-ಜ್ಞಾನಮಾತ್ರದಿಂದ ಕಿತ್ತುಹಾಕಿದ ಸುರೇಶ್ವರಗೆ- (ಇಂದ್ರನಿಗೆ) ಸುರೇಶ್ವರಾಚಾರ್ಯರಿಗೆ ; ಸ್ವರ್ವಾಸಕೆಳಸದ-ಸ್ವರ್ಗ ವಾಸಕ್ಕೆ ಪ್ರಯತ್ನಿಸದೆ. ಹೇಸಿದ–ಅಸಹ್ಯಪಟ್ಟ ; ಉರುವಿರತಿಗೆ-ಹೆಚ್ಚಿನ ವೈರಾಗ್ಯಕ್ಕೆ ; ವ್ಯಾಸತತ್ಪುತ್ರರು-ವ್ಯಾಸರೂ ಶುಕರೂ. ಸನಂದನಮುಖ್ಯಗುರು-ಪದ್ಮಪಾದರೇ ಮೊದಲಾದವರ ಗುರು. ವೈಕುಂಠ ಮಾತ್ರದಲ್ಲಿಯೇ ಹರಿರೂಪವು ಇದೆ ಎನ್ನದಂತೆ ಹುಡುಗರಿಗೂ ಹುಡುಗಿಯರಿಗೂ ತಿಳಿಯುವಂತೆ ಆ ಸ್ವರೂಪವನ್ನು ಕಾಣಿಸಿಕೊಟ್ಟು ಶಂಕರ-ಮಂಗಳಕರ ಎನ್ನಿಸಿಕೊಂಡ.]

## ಅಡಿಯ ಕಾಣದೆ ಅರಸಿ ಬಳಲಿದೆ

**ದೇಶೀತೋಡಿ** **ರೂಪಕ**

ಅಡಿಯ ಕಾಣದೆ ಅರಸಿ ಬಳಲಿದೆ ।
ಮುಡಿಯು ಕಾಣೆನೀ ಮರಹುಗಡಲಿಗೆ ಪ ॥

ಕಡೆಯ ಹಾಯಿಸೀ ಕಲುಷವೆಲ್ಲವ ।
ತೊಡೆದು ಕರುಣವ ತೋರು ಶಂಕರ ॥ ॥ ಅ ॥

ಆಸೆಯೆನ್ನನು ಐದು ವಿಷಯದ ।
ಬೀಸು ಬಲೆಯೊಳು ಬಿಸುಟು ಬಡಿವುದ ॥
ಕಾಸಿ ಕರಗಿಸಿ ಕೊರಗಿಸಿರ್ಪುದ ।
ನೇಸಪೇಳುವೆ ನಿನಗೆ ಶಂಕರ ॥ ೧

ಕರ್ಮಪಾಶದೆ ಕಟ್ಟುಬಿದ್ದೆನು ।
ದೌರ್ಮನಸ್ಯದೆ ದುಷ್ಟನಾದೆನು ॥
ನಿರ್ಮಮತ್ವದಿಂ ನಿಮ್ಮ ನೆನೆಯುವ ।
ಮರ್ಮವಾವುದೋ ಮರದೆ ಶಂಕರ ॥ ೨

ನಿನ್ನ ಭಕ್ತರ ನಯವ ತಿಳಿಯದೆ ।
ಕುನ್ನಿಯಂದದೆ ಕುಣಿದು ಕೊನೆಯುತೆ ॥
ನನ್ನಿಯರಿಯದೆ ನಾಡ ತಿರುಗಿದೆ ।
ಮನ್ನಿಸೆಲ್ಲವ ಮಾನ್ಯ ಶಂಕರ ॥ ೩ ॥

ಶಮದಮಾದಿಯು ಶರೀರವಾವುದು ? ।
ಸಮತಾಯೋಗದ ಸಾರವಾವುದು ? ॥
ಸ್ತಿಮಿತವಿರತಿಯು ತೀರವಾವುದು? ।
ಕ್ರಮದಿ ಕೇಳಿಸೈ ಕರುಣಿ ಶಂಕರ ॥ ೪ ॥

ದೇಶಕಾಲದ ದೂಸರಿಂದಲಿ ।
ಮೋಸಹೋದೆನೈ ಮೋಹಮುದ್ಗರ ।
ದೇಶಿಕೇಂದ್ರನೇ ದಿಟವನರುಹುತೆ ।
ದೋಷವೆಲ್ಲವ ದೂಡು ಶಂಕರ ॥ ೫ ॥

ಹೆಸರು ರೂಪವು ಹರಡಿದೀ ಜಗ ।
ನಿಸದವೆನ್ನುತೆ ನೀಡುಮೆಣಿಸಿದೆ ॥
ಅಸಮನೇತ್ರ ನೀನಖಿಲವೆಂತಿದ ।
ಬೆಸಸಬೇಹುದೈ ಬೇಗ ಶಂಕರ ॥ ೬ ॥

[ಮುಡಿ-ಕೊನೆ, ಮರಹುಗಡಲು-ಅಜ್ಞಾನಸಾಗರ. ಆಸೆಯು ತನ್ನ ಬಲೆಯಲ್ಲಿ ನನ್ನನ್ನು ಸಿಕ್ಕಿಸಿಕೊಂಡು ಮಾತಿನಿಂದ ಹೇಳಲಾಗದಷ್ಟು ಕಷ್ಟಪಡಿಸುತ್ತಿದೆ. ದೌರ್ಮನಸ್ಯ - ದುರ್ಮ್ಮಾನ ಕುನ್ನಿ – ನಾಯಿ, ನನ್ನಿ – ಸತ್ಯ ನಿನ್ನ ಭಕ್ತರ ಮಾರ್ಗವನ್ನು ತಿಳಿದುಕೊಳ್ಳಲಾರದೆ ಎಲ್ಲೆಲ್ಲಿಯೂ ಇರುವ ನಿನ್ನನ್ನು ಹುಡುಕಿಕೊಂಡು ದೇಶದೇಶಗಳನ್ನು ತಿರುಗಿದ್ದು ಮಹಾಪರಾಧವಾಯಿತು. ಸ್ತಿಮಿತವಿರತಿ ಸ್ಥಿರವಾಗಿರುವ ವೈರಾಗ್ಯ. ಕೇಳಿಸು–ಹೇಳು ದೂಸರಿಂದ–ಕಾರಣದಿಂದ, ಸಂಬಂಧದಿಂದ ; ಮೋಹಮುದ್ಗರ-ಅವಿದ್ಯಾಭ್ರಾಂತಿಯನ್ನು ಒಡೆದು ಪುಡಿ ಮಾಡುವ ಸುತ್ತಿಗೆ ಹೆಸರು ರೂಪವು ಹರಡಿದೀ ಜಗ–ನಾಮ ರೂಪಾತ್ಮಕವಾಗಿರುವ ಈ ಜಗತ್ತು, ನಿಸದವೆನ್ನುತೆ ನೀಡುಮೆಣಿಸಿದೆ - ನಿಜವೆಂದು ಚನ್ನಾಗಿ ನಂಬಿದೆನು; ಅಸಮನೇತ್ರ- ಮುಕ್ಕಣ್ಣ ; ನೀನೇ ಎಲ್ಲವೂ ಎಂಬುದು ಹೇಗೆಂಬುದನ್ನು ತಿಳಿಸಿಕೊಡಬೇಕು.]

## ಬೋಧಾಮೃತ

ಪರಮಾರ್ಥ ಸತ್ಯನೆ ಪರಿಪೂರ್ಣ ಬೋಧನೆ ।
ಪರತರಾನಂದದ ಸಿರಿದೇವ ॥
ಪರತರಾನಂದದ ಸಿರಿದೇವ ಗುರು ಶಂ ।
ಕರ ನಿನ್ನ ಚರಣವೇ ಶರಣೆಂಬೆ ॥ ೧ ॥

ಜಗವೆಲ್ಲ ಹುಟ್ಟಿ ತೋರುತಲಿದ್ದು ಕಡೆಯೊಳು ।
ಮುಗಿವುದದಾರೊಂದು ರೂಪಿನಲಿ ॥
ಮುಗಿವುದದಾರೊಂದು ರೂಪಿನಲೆಲ್ಲವಾ ।
ಭಗವಂತ ನಿನಗಾನತನಪ್ಪೆ ॥ ೨ ॥

ವೇದಾಂತ ವಾಕ್ಯಂಗಳೋದಿಗೆಯಲಿ ಪೇಳ್ವ ।
ಭೇದರಹಿತ ಪರತತ್ತ್ವವಿದು ॥
ಭೇದರಹಿತ ಪರತತ್ತ್ವವಿದೆ ಎನು ।
ತಾದರದಲಿ ಕೇಳಿ ಜನರೆಲ್ಲ ॥ ೩ ॥

ವೇದಾಂತ ಬೋಧಾಮೃತವೆಂಬ ಹೆಸರಿಟ್ಟು ।
ಸಾದರದಲಿ ಪೇಳ್ವೆ ಕಾವ್ಯವಿದ ॥
ಸಾದರದಲಿ ಪೇಳ್ವೆ ಕಾವ್ಯವಿದನುಭವ ।
ವೇದವು ಕರುಬದೆ ಸವಿಗೊಳ್ಳಿ ॥ ೪ ॥

ತಾನು ತಾನಲ್ಲವೆಂಬುದ ನೋಡಿ ತಿಳಿದವ ।
ನೇನೆಂದೂ ಬೇಡದ ವಿರತಿಯುವ ।
ಏನೆಂದೂ ಬೇಡದ ವಿರತಿಯು ತಳೆದಿಹ ।
ಮಾನುಭಾವನು ತಾನೆ ಮಾದೇವ

ಶಮೆದಮೆಯುಪರತಿ ಶ್ರದ್ಧೆ ತಿತಿಕ್ಷೆಯುಂ ।
ಸಮತೆಯೋಗದ ಚಿತ್ತವಳವಟ್ಟ ।
ಸಮತೆಯೋಗದ ಚಿತ್ತವಳವಟ್ಟ ಧೀರನೆ ।
ಶಮನ ಶಮನ ತಾನು ದಿಟದಿಂದ ೬ ॥

ಅವಿವೇಕಿ ಜನರಿಂದ್ರಿಯ ಭೋಗಗಳ ।
ಹವಣಿಪ ಬಯಕೆಯ ಮೋಕ್ಷದಲಿ ॥
ಹವಣಿಪ ಬಯಕೆಯ ಮೋಕ್ಷದಲಿರಿಸಿರೆ
ಭವನಾಶೆ ಭವ ಬಯಲಾಗುವುದುಂ ॥ ೭ ॥

ಮರೆವವಿವೇಕವು ವಿರತಿಯು ಶಮಮೊದ ।
ಲರುಗುಣ ಮೋಕ್ಷದ ಹಂಬಲಿಕೆ ॥
ಆರುಗುಣ ಮೋಕ್ಷದ ಹಂಬಲಿಕೆಯು ಕೂಡ ।
ಲರುವೊಗನಯ್ಯನ ಸಿರಿಸೂರೆ ॥ ೮ ॥

ಈ ನಾಲ್ಕೂ ಸಾಧನವೇನೊಂದರಿಯದೆ ।
ನಾನು ನನ್ನದು ಎಂಬ ಹೆಮ್ಮೆಯಲಿ ॥
ನಾನು ನನ್ನದು ಎಂಬ ಹೆಮ್ಮೆಯಲಿರುವನ
ಶ್ವಾನಕೆ ಕಡೆಯೆಂದು ಕರೆಯುವುದು ॥ ೯ ॥

## ಗುರುವದೊರ್ವನು

**ಶಂಕರಾಭರಣ** **ಏಕತಾಳ**

ನೆಲನೊಳೆನಿತೊ ಮಂದಿ ಗುರುಗ । ಳಲೆದು ಪೋದರಿನ್ನು ಮುಂದೆ
ಪಲಬರಿತ್ತ ಬರಲುಬಹುದು । ಕಾಲವಿಪ್ಪುದು ॥
ಅಳಿಸಿ ಗುರುವು ಶಿಷ್ಯನೆಂಬ । ಹಳೆಯ ಭೇದವನ್ನು ಜಗದಿ
ಮೊಳೆಯದಂತೆ ಮಾಡಿಕೊಟ್ಟ ಗುರುವದೊರ್ವನು ॥ ೧ ॥

ವೇದ, ಮಂತ್ರ, ತಂತ್ರ, ಯೋಗ । ಪಾರವಶ್ಯವೆಂದು ಮಂಕು
ಬೂದಿಯನ್ನು ತಳಿವ ಗುರುಗಳಳೆಬರಿರುವರು ॥
ಬೋಧೆಯಿಂದಲಳಿಹ ಮೋದ । ಬಾಧೆ ಮತ್ತೆ ಸುಳಿಯದೆಂದು
ಸಾಧನೆಯ ತೋರಿಕೊಟ್ಟ ಸದಯನೊರ್ವನು ೨ ॥

ಸತ್ತಮೇಲೆ ಸೌಖ್ಯವೆಂದು ಸುತ್ತುಹಾದಿಯನ್ನು ಹೇಳಿ
ಕತ್ತಲೆಯೊಳು ನೂಕುತಿಹರೆನಿತ್ತೊ ಗುರುಗಳು ॥
ತತ್ತ್ವಮಸಿಯೆನಿಪ್ಪ ವಾಕ್ಯ । ದುತ್ತಮಾನುಭವವ ತೋರಿ
ಚಿತ್ತಶಾಂತಿಯುಮರ್ದ ಚಿಮುಕಿಸಿರುವನೊರ್ವನು ॥ ೩ ॥

ಪಾದಪೂಜೆ ಭಿಕ್ಷವೆಂದು ಹೋದ ಮನೆಯೊಳೆಲ್ಲ ಕಾಡಿ
ಬೀದಿವರಿವ ಯತಿಗಳೆನಿಬರಿಹರೊ ಕಾಣೆನು ॥
ಆದಿ ಅಂತ್ಯವಿಲ್ಲದಿರುವ । ದಾದ ನಿತ್ಯತೃಪ್ತಿಗಿದುವೆ
ಹಾದಿಯೆಂದು ತೋರಿಕೊಟ್ಟ ಸಾಧುವೊರ್ವನು ॥ ೪ ॥

ಮಾಯೆಯಿಂದ ತೋರ್ಪ ಭೇದ । ಕಾಯುವೆಲ್ಲವಿತ್ತು ಪಲರು
ನಾಯಿಯಂತೆ "ನಾನು" "ನೀನು" ಎಂದು ಬೊಗಳ್ವರು ॥
ಬೀಯವಿಲ್ಲದೆಲ್ಲರೊಳಗ । ಮೇಯನೊರ್ವನಿರುವನೆಂಬೆ
ಜೀಯ, ಶಂಕರಾಖ್ಯ ಮೌನಿ ನೀನದೊರ್ವನೆ ॥ ೫ ॥

[ಗುರುಶಿಷ್ಯ ಭೇದವನ್ನು ನಾಶಮಾಡಿ ಮತ್ತೆ ಅದು ಹುಟ್ಟದಂತೆ ಮಾಡಿರುವ ಗುರು ಒಬ್ಬನೇ. ವಾದ–ಧಾತುವಿದ್ಯೆ, ವಶ್ಯ–ಮೋಹಿನೀ ವಿದ್ಯೆ, ಅರೆಬರು–ಕೆಲವರು ; ನಾಶವಾದ ಮೋಹದ ಬಾಧೆ ಮತ್ತೆ ಇತ್ತ ಸುಳಿಯಲೂಬಾರದಂಥ ಜ್ಞಾನಸಾಧನವನ್ನು ತೋರಿಸಿಕೊಟ್ಟವನು ಒಬ್ಬನೇ, ಸುತ್ತುಹಾದಿ – ಇಲ್ಲಿಯೇ ನಮ್ಮಲ್ಲಿರುವ ಆನಂದಕ್ಕೆ ದೇವಯಾನಾದಿ ಮಾರ್ಗಗಳನ್ನು ಹೇಳುವುದು ಸುತ್ತುಹಾದಿ: ಅಮರ್ದ–ಅಮೃತವನ್ನು ಬೀಯವಿಲ್ಲದೆ–ನಾಶವಿಲ್ಲದೆ ಅಮೇಯನೊರ್ವನು–ಪ್ರಮಾಣಕ್ಕೆ ಗೋಚರವಾಗದೆ ಇರುವ ಏಕಾತ್ಮನು.

## ಸದ್ಗುರು ಚರಣಕೆ ಬಾಗಿ

**ಹಿಂದೂಸ್ಥಾನಿ ಕಾಪಿ** **ಆದಿತಾಳ**

ಸದ್ಗುರು ಚರಣಕೆ ಬಾಗಿ । ನಿಮ್ಮ । ಹೃದ್ಗತ ಪಾಪವ ನೀಗಿ ॥ ಪ ॥

ಸದ್ಗುರುವಿಗೆ ಶರಣೆನ್ನಿ । ದೃಢ । ಹೃದ್ಗ್ರಂಥಿ ಹರಿವುದು ನನ್ನಿ ।
ಸದ್ಗುರು ಭಕ್ತಿಯ ತನ್ನಿ । ಶುಭ । ಚಿದ್ಗಗನವೆ ನೆಲೆ ಬನ್ನಿ ॥ ೧ ॥

ಗುರುವಿಂದಲೆ ಪುರುಷಾರ್ಥ । ಸ । ದ್ಗುರುವಿಲ್ಲ ಬಾಳೆ ವ್ಯರ್ಥ ।
ಗುರುವೇ ಸರ್ವ ಸಮರ್ಥ । ಪರಿ । ಹರಿಪನು ಸರ್ವಾನರ್ಥ ॥ ೨ ॥

ಗುರು ಬ್ರಹ್ಮವು ಗುರು ವಿಷ್ಣು । ಶ್ರೀ । ಗುರುವೇ ಸರ್ವಸಹಿಷ್ಣು
ಗುರು ಶಂಕರ ಪರಬ್ರಹ್ಮನೇ । ಸ । ದ್ಗುರುವೇ ಕಾವನು ನಮ್ಮ ॥ ೩ ॥

ಗುರುವಿಂಗೆಣೆ ಯಾರಿಲ್ಲ । ಸ । ದ್ಗುರುವೇ ಹೊಣೆ ನಮಗೆಲ್ಲ ।
ಗುರುವೇ ತತ್ವವ ಬಲ್ಲ । ಆ । ಗುರುವನು ಮರೆವುದು ಸಲ್ಲ ॥ ೪ ॥

ಗುರುವಿಂದಲೆ ಆನಂದ । ಇದ । ಮರೆತರೆ ದಿಟ ಭವಬಂಧ ।
ಗುರು ನಿಷ್ಕಾಮ್ಯಾತ್ಮನೆ ಸಂದ । ಶ್ರೀ । ಗುರುವೇ ಸಚ್ಚಿದಾನಂದ ॥ ೩ ॥

## ಪರಹಂಸನೆಲ್ಲಿ

ಪರಹಂಸನೆಲ್ಲೆಂದು ಬರಿದೆ ಅರಸದಿರಿ ಪರಮಾತ್ಮನೆ ಪರಹಂಸ ।
ಪರಮಾತ್ಮನಲಿ ಬೆರೆದಿರುವ ನಿಷ್ಕರ್ಮನೆ ಪರಮಾರ್ಥದ ಪರಹಂಸ ॥ ಪ ॥

ಗುರುನಿಷ್ಠೆ ಯಜ್ಞವು ತಪವೆಂಬಾಶ್ರಮಗಳ ಹೊರಗಿಹನೇ ಪರಹಂಸ
ನಿರುತವು ಪ್ರಣವೋಪಾಸನೆಯಿಂದಲಮೃತದ ನೆರೆಯೊಳಿಹನೆ ಪರಹಂಸ ॥ ೧ ॥

ಮನೆ ಹೊಲ ಹೆಂಡತಿ ಮಕ್ಕಳು ಹಣಗಳ ನೆನಹಿಲ್ಲದಿಹ ಪರಹಂಸ ।
ಮನೆಯೆಳರಲಿ ಮಾಧೂಕರ ವೃತ್ತಿಯಿಂದಲೆ ತಣಿವ ಭಿಕ್ಷುವೆ ಪರಹಂಸ ॥ ೨ ॥

ಜ್ಯೋತಿಷಸಾಮುದ್ರಿಕ ಮಂತ್ರಯಂತ್ರ ವಿಖ್ಯಾತನಲ್ಲವು ಪರಹಂಸ ।
ಭೀತಿಯಿಂ ವಾಸವಶ್ಯಗಳನು ಬಿಸುಟ ಮಹಾತುಮನಾ ಪರಹಂಸ ॥ ೩ ॥

ವೇದಾಂತ ಶ್ರವಣ ಮನನ ನಿಧಿಧ್ಯಾಸನ ಮೋದನಾಗಿಹ ಪರಹಂಸ ।
ಸಾದರದಲಿ ಸರ್ವಾತ್ಮದರ್ಶನಕಾಗಿ ಕಾದಿಹನಾ ಪರಹಂಸ ॥ ೪ ॥

ದೇಹ ಧರ್ಮ ಕರ್ಮಂಗಳ ಮೀರಿದ ಸಾಹಸಿಯೇ ಪರಹಂಸ ।
ಊಹಿಸಲಸದಳವಿಂದ್ರಿಯದಶಕದ ದಾಹವಿಂಗಿರೆ ಪರಹಂಸ ॥ ೫ ॥

ಕಾಮಕ್ರೋಧಂಗಳಂಹತೆ ಮಮತೆ ದರ್ಪದಾಮವು ಬಿಡೆ ಪರಹಂಸ
ನೇಮದೇಕಾಂತವಾಸವ ಧ್ಯಾನಯೋಗವ ಕಾಮಿಸುವನೆ ಪರಹಂಸ ॥ ೬ ॥

ಶಮದಮೆಯುಪರತಿ ಶ್ರದ್ಧೆತಿತಿಕ್ಷೆಯು ಸಮತೆಯು ಬಿಡ ಪರಹಂಸ
ಅಮಿತ ವೈರಾಗ್ಯ ವಿವೇಕ ಮೋಕ್ಷೇಚ್ಛೆಯು ಮಮತೆಯು ದಡ ಪರಹಂಸ ॥ ೭ ॥

ಏಷಣಾತ್ರಯವೆಂಬ ರೋಷಣದಂಚಿಕೆ ನಾದವಾದನೆ ಪರಹಂಸ ।
ಕಾಷಾಯ ದಂಡಕ ಮಂಡಲು ಪಾದುಕಾ ವೇಷದೂರನೆ ಪರಹಂಸ ॥ ೮ ॥

ಉಡುವ ಬಟ್ಟೆಯ ಚಿಂತೆಯುಂಬುವನ್ನದ ಚಿಂತೆಯುಡರಿಲ್ಲದನೆ ಪರಹಂಸ
ಪಡುವಹಾಸಿಗೆ ನೆಲವಾಕಾಶವೆ ಹಚ್ಚಡವೆಂಬ ಮುನಿ ಪರಹಂಸ ॥ ೯ ॥

ಜಾತಿವರ್ಣಾಶ್ರಮ ಧರ್ಮವ ಮೀರ್ದವಧೂತನವನು ಪರಹಂಸ ।
ಪ್ರೀತಿಲಿ ಪೂಜಿಪ ಭಕ್ತರಿಷ್ಟಾರ್ಥವನೋತು ಸಲ್ಲಿಪ ಪರಹಂಸ ॥ ೧೦

ಸಂತನಸಂತಮಹಾಂತನೆಂಬ ಹೆಸರಾಂತನಲ್ಲವು ಪರಹಂಸ ।
ಅಂತೇವಾಸಿಗಳಾ ಸಂತೆಯು ಕೂಡಿಪರಂತಲ್ಲವಾ ಪರಹಂಸ ॥ ೧೧ ॥

ಹೊಗಳುವ ತೆಗಳುವ ಮಾತಲೆಕ್ಕಿಸದ್ವೈತವಿಗಳಿತನಾ ಪರಹಂಸ ।
ನಗುವ ಮಕ್ಕಳ ಹುಚ್ಚರಂದವ ತೋರುವ ಬಗೆಯುವನಾ ಪರಹಂಸ ॥ ೧೨ ॥

ದಾಸಃನೋಹಮ್ಮೆಂಬ ಮಾಸಿಲ್ಲದ ನಿರ್ವಿಶೇಷದೊಳಿಹ ಪರಹಂಸ ।
ಈ ಸಂಸೃತಿ ಭೇದಲೇಶವಿಲ್ಲದ ಪರವಾಸುದೇವ ಪರಹಂಸ ॥ ೧೩ ॥

ಬಿಚ್ಚಿ ಹೃದ್ಗ್ರಂಥಿಯ ಕೊಚ್ಚಿ ಸಂಶಯಗಳನೆಚ್ಚತವಿಹ ಪರಹಂಸ ।
ಸಚ್ಚಿದಾನಂದ ಶಂಕರರೂಪದೆ ನಿಂದ ಸ್ವಚ್ಛನೆ ತಾ ಪರಹಂಸ ॥ ೧೪ ॥

## ಜಯಜಯಶಂಕರ ಲೋಕಗುರೋ

ಜಯ ಜಯ ಶಂಕರ ಲೋಕಗುರೋ
ಭಯಹರ ಶಂಕರ ಭುವನಗುರೋ ॥ ಪ ॥

ನಿರ್ಗುಣಸಗುಣಾಕಾರ ಗುರೋ ।
ನಿರ್ಗತ ನಿಖಿಲಾಕಾರ ಗುರೋ ।
ಸರ್ಗಸ್ಥಿತಿ ಸಂಹಾರ ಗುರೋ ।
ಸರ್ಗಾದಿತ್ರಯ ದೂರ ಗುರೋ ॥ ೧ ॥

ಸುರಭೂಸುರ ಸಂತೋಷ ಗುರೋ ।
ನರತನು ಮಾಯಾವೇಷ ಗುರೋ ।
ದುರಿತವ್ರಾತ ಭ್ರೇಷ ಗುರೋ ।
ಸುರುಚಿರ ಭಾರತಭೂಷ ಗುರೋ ॥ ೨ ॥

ಕಾಲದೇಶಮಿತಿ ದೂರ ಗುರೋ ।
ಕಾಲಡಿಕಲಿತಶರೀರ ಗುರೋ ।
ಕ್ಷಾಲಿತ ಸರ್ವವಿಕಾರ ಗುರೋ ।
ಬಾಲ ಶಂಕರಾಕಾರ ಗುರೋ

ಶಿವಗುರು ಪರ ಸಂಮೋದ ಗುರೋ ।
ಅವಿರತ ಪರಮಾಹ್ಲಾದ ಗುರೋ ।
ಸುವಿದಿತ ವಿದ್ಯಾಭೇದ ಗುರೋ ।
ಕವಿಜನತೋಷ ವಿನೋದ ಗುರೋ ॥ ४ ॥

ಆರ್ಯಾಂಬಾ ಸುಪ್ರೀತ ಗುರೋ ।
ಚರ್ಯಾನಿಷ್ಠಾಪೂತ ಗುರೋ ।
ಮರ್ಯಾದಾ ಸ್ಥಿತಿ ನಾಥ ಗುರೋ ।
ತುರ್ಯಾಶ್ರಮ ವಿಖ್ಯಾತ ಗುರೋ ॥ ೫ ॥

ಗುರುಗೋವಿಂದ ಛಾತ್ರ ಗುರೋ ।
ಗುರುಕರುಣಾಮೃತ ಪಾತ್ರ ಗುರೋ ।
ಸುರವರಪೂಜ್ಯ ಚರಿತ್ರ ಗುರೋ ।
ಪರಿಚಿತ ಕಾಶೀಕ್ಷೇತ್ರ ಗುರೋ ॥ ೬

ಪ್ರಸ್ಥಾನತ್ರಯ ಭಾಷ್ಯ ಗುರೋ ।
ಸ್ವಸ್ಥಾನೇಚ್ಛ್ವಭಿಲಾಷ್ಯ ಗುರೋ ।
ವಿಸ್ಮೃತವೇದ ಸುಜೋಷ್ಯ ಗುರೋ ।
ಉತ್ತಮಶಿಷ್ಯಾನ್ವೇಷ್ಯ ಗುರೋ ॥ ೭ ॥

ಅಧ್ಯಾರೋಪ ನಿರಾಸ ಗುರೋ ।
ವಿದ್ಯಾಶಕ್ತಿ ವಿಲಾಸ ಗುರೋ ।
ಸದ್ಯೋಮುಕ್ತಿ ನಿದೇಶ ಗುರೋ ।
ಭೇದ್ಯವಾದ ಪರಿಹಾಸ ಗುರೋ ॥ ೮ ॥

ಸುರಗುರುಪೂಜಿತ ಭಾಷ ಗುರೋ ।
ಸುರೇಶವಾರ್ತಿಕ ತೋಷ ಗುರೋ ।
ಪರಿಮಾರ್ಜಿತ ಗುಣ ದೋಷ ಗುರೋ ।
ಪರಿಪೂರ್ಣಾತ್ಮಸುವೇಶ ಗುರೋ ॥ ೯ ॥

ಸ್ಥಾಪಿತ ಪರಮಾದ್ವೈತ ಗುರೋ ।
ಲೋಪಿತ ನಿಖಿಲದ್ವೈತ ಗುರೋ ।
ಖ್ಯಾಪಿತ ವೇದಾಂತಾರ್ಥ ಗುರೋ ।
ಪ್ರಾಪಿತ ನಿಜಪದ ಸಾರ್ಥ ಗುರೋ ॥ ೧೦ ॥

ಭಕ್ತಾವಿದ್ಯಾ ನಾಶ ಗುರೋ ।
ಭಕ್ತವೇದ್ಯ ಪರಮೇಶ ಗುರೋ ।
ಭಕ್ತಹೃದ್ಗುಹಾವೇಶ ಗುರೋ ।
ಭಕ್ತಹೃದಯ ಕೈಲಾಸ ಗುರೋ ॥ ೧೧ ॥

ನಿತ್ಯಸಚ್ಚಿದಾನಂದ ಗುರೋ ।
ನಿತ್ಯನಿಷೂದಿತ ಬಂಧ ಗುರೋ ।
ನಿತ್ಯಶುದ್ಧನಿಷ್ಪಂದ ಗುರೋ ।
ನಿತ್ಯಪೂಜ್ಯ ಗೋವಿಂದ ಗುರೋ ॥ ೧೨ ॥

## ಕಾಲಟಿ ಭಾಗ್ಯದ ಬಾಲನಿಗೆ

**ಸುರಟಿ** **ಆಟತಾಳ**

ಮಂಗಲಂ ಮಂಗಲಂ । ಶಂಕರನಿಗೆ ॥ ಪ ॥

ಕಾಲಟೀಭಾಗ್ಯದ ಬಾಲನಿಗೆ । ಕಲಿಕಾಲದೋಷಹರಲೀಲನಿಗೆ ।
ಪಾಲಿತಮೋಕ್ಷಾಶ್ರಮಲೋಲನಿಗನು । ಮೇಲವೈರಾಗ್ಯಸುಶೀಲನಿಗೆ । ಸದಾ ॥ ೧ ॥

ರೇವಾತೀರವಿಭೂಷಣನಿಗೆ । ಗುರುಗೋವಿಂದಚರಣಶುಶ್ರೂಷಣನಿಗೆ ॥
ಭಾವಿತಾರ್ಥಶ್ರುತಿಶೀರ್ಷನಿಗೆ । ತತ್ತ್ವ । ಭಾವಪ್ರಕಾಶಕಭಾಷಣನಿಗೆ ಸದಾ ॥ ೨ ॥

ನಿರ್ಜಿತತಾರ್ಕಿಕವಾದನಿಗೆ । ಪರಿ । ಮಾರ್ಜಿತಮಾಯಗಭೇದನಿಗೆ ॥
ಭರ್ಜಿತಭವಬೀಜಾಮೋದನಿಗೆ । ದೋಷ । ವರ್ಜಿತ ಶಂಕರನಾದನಿಗೆ ಸದಾ ॥ ೩ ॥

[ಮೋಕ್ಷಾಶ್ರಮ–ಸಂನ್ಯಾಸಾಶ್ರಮ, ಅನುವೇಲ–ಹೆಚ್ಚಾದ ರೇವಾ–ನರ್ಮದಾ ನದಿ ಭರ್ಜಿತ–ಹುರಿಯಲ್ಪಟ್ಟ. ಭವಬೀಜ – ಸಂಸಾರದ ಕಾರಣ, ಅವಿದ್ಯೆ ; ಶಂಕರ–ಪರಮೇಶ್ವರ]

## ಮಂಗಲ ಗುರುವರ ಮಂಗಲ

**ಮಧ್ಯಮಾವತಿ**

ಮಂಗಲ ಗುರುವರ ಮಂಗಲ ।
ಶುಭ ಮಂಗಲದಾಗರ ಮಂಗಲ ಪ ॥

ಪರವೈರಾಗ್ಯ ವಿವೇಕ ಶಮಾದಿಯು । ಕರುಮಾಡವೆ ಶುಭಮಂಗಲ ।
ಪರಮಹಂಸರ ಪಾರಿವ್ರಾಜ್ಯದ ಸಿರಿಯೋ । ಜಯು ಜಯು ಮಂಗಲ ॥ ೧ ॥

ವೇದಾಂತಾರ್ಥದ ಹಾದಿಯ ತೋರಿದ । ಆದಿ ಶಂಕರನೇ ಮಂಗಲ ।
ಬಾದರಾಯಣರ ವಾದದ ಮರ್ಮವ । ಭೇದಿಸಿದನೆ ಜಯು ಮಂಗಲ ॥ ೨ ॥

ಪ್ರಸ್ಥಾನತ್ರಯಭಾಷ್ಯರತ್ನಗಳ । ಸುಸ್ಥಾನವೇ ಶುಭಮಂಗಲ ।
ಸ್ವಸ್ಥತೆಯೊಂದುವ ಸದ್ಯೋಮುಕ್ತಿಯು । ವಿಸ್ತಾರವೆ ಜಯು ಮಂಗಲ ॥ ೩ ॥

ವಿದ್ಯಾವಿದ್ಯೆಯ ವಿಂಗಡಿಸುವ ಪರ । ವಿದ್ಯೆಯ ದೇಶಿಕ ಮಂಗಲ ।
ಹೃದ್ಯಾದ್ವೈತದ ಸಿದ್ಧಗುರುವೆ ಜಗ । ದುದ್ಧಾರನೆ ಜಯು ಮಂಗಲ ॥ ೪ ॥

ಮಾತಿಗೆ ಮನಸಿಗೆ ನಿಲುಕದ ರೂಪಿನ । ಚೇತನ ಚೇತನ ಮಂಗಲ ।
ಪ್ರೀತಿಗೆ ಕಾಯುಂವ ಸಚ್ಚಿದಾನಂದ ಸ । ರ್ವಾತುಮ ಜಯಂ ಜಯಂ ಮಂಗಲ ॥ ೫ ॥

## ಜನುಮ ಸಾರ್ಥಕ್ಯವಿದು

**ಬೇಗಡೆ** ಛಾಪು

ಜನುಮ ಸಾರ್ಥಕ್ಯವಿದು । ಭೂಲೋಕದಲ್ಲಿ ನರ ॥ ಪ ॥

ಜನುಮ ಸಾರ್ಥಕ್ಯವಿ । ದನುಮಾನವಲ್ಲವು ।
ಮನುಮುನಿಗಳ ಮತ । ವನುಭವಸಮ್ಮತ ॥ ಅ ॥

ವೇದಶಾಸ್ತ್ರವ ಕೇಳ್ವುದು । ವೇದೋಕ್ತ ಕರ್ಮವ । ನಾದರದಲಿ ಮಾಳ್ಪುದು ।
ಆದ ಕರ್ಮವನೀಶಗರ್ಪಣೆ । ಗೈದು ಕಾಮ್ಯನಿಷಿದ್ಧಗಳ ಕಿಡು ।
ಹಾದಿಯಲಿ ಕಾಲಿಡದೆ ದುರಿತವ । ಬೂದಿಗೈಯುವ ಜಾಣತನವಿದು ॥ ೧ ॥

ಸಂತರ ಸೇವಿಪುದು । ಶಾಂತ್ಯಾದಿ ಗುಣಗಳ ಸಂತತ ಭಾವಿಪುದು ।
ಅಂತರಂಗದೆ ಭಕುತಿಯಲಿ ಭಗ । ವಂತನನು ನೆಲೆಗೊಳಿಸಿ ತತ್ಪದ ।
ಚಿಂತೆಯಲಿ ಸುಖವಡೆವ ಪರಮೈ । ಕಾಂತವಿರತಿಯನೊಂದಿ ಬಾಳ್ವುದು ॥ ೨ ॥

ನಿತ್ಯಾನಿತ್ಯವ ಕಾಂಬುದು । ಕೈವಲ್ಯಪದವಿಯೆ । ನಿತ್ಯಸತ್ಯವಿದೆಂಬುದು ॥
ಸತ್ಯಚಿತ್ಸುಖರೂಪು ನಿನ್ನದು । ನಿತ್ಯಸತ್ಯವಿದೆಂಬ ಸದ್ಗುರು ।
ಸತ್ಯ ವಚನದ ನೆಲೆಯ ಮನಗಂ । ಡತ್ಯಧಿಕ ಹರ್ಷಾಶ್ರುವೇಳ್ವುದು ॥ ೩ ॥

ಪರಮಾತ್ಮನಲಿ ತೋರ್ಪುದು । ಬರುಬಯಲ ಜಗವಿದು । ಪೆರತಿಲ್ಲವೆನುತಿರ್ಪುದು ॥
ಸುರಿವ ಭೂತಂಗಳೊಳು ತನ್ನನು । ಸರುವ ಭೂತಂಗಳನು ತನ್ನೊಳು ।
ನಿರುತ ಕಾಣುವ ಪರಮ ಯೋಗದೊ । ಳರಿಕೆಗೊಂಡಿಹ ಸಮತೆಯರಿವದು ॥ ೪ ॥

ಮಾಯೆಯ ಮೀರುವದು । ಮರವಾಸೆಕೆಲಸಗಳಾವಯುಸತೀರುವದು ।
ಕಾಯಕರಣಪ್ರಾಣಬುದ್ಧಿಯ । ಬೀಯವಳಿದುಶಿವಾತ್ಮಭೂತನಿ ।
ಕಾಯವೆಂಬೀ ಭೇದವಡಗುತ । ಮೇಯಶಂಕರ ಗುರುವೆನಿಪ್ಪುದು ॥ ೫ ॥

[ಅನುಮಾನವಲ್ಲ – ಊಹಿಸಿ ಹೇಳುವದಲ್ಲ. ಕಿಡುಹಾದಿ – ಕೆಟ್ಟ ದಾರಿ. ಪರಮೈಕಾಂತವಿರತಿ–ನಿಯಮದಿಂದ ಒಂದೇ ಸಮನಾಗಿರುವ ವೈರಾಗ್ಯ (ಸಚ್ಚಿದಾನಂದ ರೂಪವು) ನಿತ್ಯಸತ್ಯ – ಯಾವಾಗಲೂ ಸತ್ಯ ; ಹರ್ಷಾಶ್ರು – ಆನಂದ ಬಾಷ್ಪ ಬರುಬಯಲ–ಹುರುಳಿಲ್ಲದ, ಪೆರತಿಲ್ಲ–ಬೇರೆಯಿಲ್ಲ. ಅರಿಕೆಗೊಂಡಿಹ–ಪ್ರಸಿದ್ಧವಾಗಿ–ರುವ. ಮರವಾಸಿಕೆಲಸಗಳ–ಅವಿದ್ಯಾಕಾಮಕರ್ಮಗಳ, ಆಯಾಸ – ಮತ್ತೆ ಮತ್ತೆ ಅನುಭವಿಸುವ ಶ್ರಮ, ಸಂಸಾರ ; ಬೀಯುವಳಿದ – ನಾಶವಾಗಿ ಹೋಗಿ, ಶಿವಾತ್ಮ ಭೂತನಿಕಾಯ–ಈಶ್ವರನು, ತಾನು, ಉಳಿದ ಪ್ರಾಣಿಗಳ ಸಮೂಹ. ಅಮೇಯ–ಪ್ರಮಾಣಾಗೋಚರ.]

## ಏಳಿರೇಳಿರಿ

**ಬಿಲಹರಿ** **ರೂಪಕ**

ಏಳಿರೇಳಿರಿ । ಎಚ್ಚರಗೊಳ್ಳಿರಿ ನೀವಿ । ನ್ನೇಳಿರೇಳಿರಿ ॥ ಪ ॥

ಏಳಿರೇಳಿ ಬಾಳಿ ಬದುಕಿ । ಕೀಳು ಸಂಸ್ಕೃತಿ ಕಾಳುಗೊಳಿಸುವವರೆ ನೀವಿನ್ನೇಳಿ ॥

ಏಕೆ ಮರೆದಿರಿ ? । ಶುದ್ಧಾತ್ಮನ ಸಮ್ಮೋಹದೊ ।
ಳೇಕೆ ಬೆರೆದಿರಿ ? ಜೋಕೆ ಕೆಡುವಿರೇಕಿದಿಂತು ।
ಕಾಕುಬುದ್ಧಿಯ । ನೂಕುತಲಾತ್ಮನ ಜಾನಿಸು ತೇಳಿ ॥ ೧ ॥

ಧರ್ಮ ಮಾಡಿರಿ । ನಿಷ್ಕಾಮದ ಕರ್ಮಂಗಳ ।
ಮರ್ಮ ನೋಡಿರಿ । ಕರ್ಮದ ಫಲವಿಮ್ಮಡಿಸುವ
ದೊಮ್ಮೆ ವ್ಯಾಘ್ರ ಚರ್ಮನ ನಾಮವ ನೆನೆಯುತಲೇಳಿ ॥ ೨ ॥

ಗುರುವ ಕಾಣಿರಿ । ಸಂಸಾರದ ಮಾಯಾಕೃತಿ ।
ಯಿರವಮಾಣಿರಿ । ಸರುವರಲ್ಲಿ ಶರುವನಿರುವ ।
ಥರವ ಶಂಕರ ಗುರುವರನೊರೆವುದನಾಲಿಸುತೇಳಿ ॥ ೩ ॥

[ಕಾಳುಗೊಳಿಸುವರೆ–ನಾಶ ಮಾಡುವುದಕ್ಕೆ. 'ಶುದ್ಧಾತ್ಮನ' ಈ ಮಾತನ್ನು ಹಿಂದಕ್ಕೂ ಮುಂದಕ್ಕೂ ಅನ್ವಯಿಸಿಕೊಳ್ಳಬಹುದು, ಶುದ್ಧಾತ್ಮನನ್ನು ಏಕೆ ಮರೆತಿರಿ, ಶುದ್ಧಾತ್ಮನ ಸಮ್ಮೋಹದಲ್ಲಿ ಏತಕ್ಕೆ ಸೇರಿಕೊಂಡಿರಿ. ? ಅಥವಾ ಶುದ್ಧಾತ್ಮನ ಸಮ್ಮೋಹದೊಳು-ಶುದ್ಧಾತ್ಮನನ್ನು ಅರಿಯದೆ ಉಂಟಾದ ಮೋಹದಲ್ಲಿ. ಜಾನಿಸುತ–ಧ್ಯಾನಿಸುತ್ತ,ಇಮ್ಮಡಿಸುವುದು (ನಿಷ್ಕಾಮಕರ್ಮದಿಂದ) ಫಲವು ಎರಡರಷ್ಟಾಗುವುದು.

## ನಿತ್ಯಾನಿತ್ಯವಿವೇಕವನರಿಯದೆ

**ಧನ್ಯಾಸಿ** **ಆದಿತಾಳ**

ನಿತ್ಯಾನಿತ್ಯವಿವೇಕವನರಿಯದೆ। ಸತ್ತುಹುಟ್ಟುವರೆಲ್ಲ ॥ಪ॥
ನಿತ್ಯವಿದನು ಸುವಿಚಾರದಿ ತಿಳಿದರೆ । ಸತ್ತುಚಿತ್ತುಸುಖಿರಹರಲ್ಲ ॥ ಅ ॥

ಹೆಂಡತಿಮಕ್ಕಳುಹೊಲಮನೆಹಣವೆಂ । ದಂಡಲೆಯುವರಲ್ಲ ॥
ಕಂಡು ಕಾಲವಶವೆಲ್ಲವಿದೆಂಬುದ । ಭಂಡತನದಿ ನೆಚ್ಚುವರಲ್ಲ ॥ ೧ ॥

ಹರೆಯ ನಿಲ್ಲದೈಸಿರಿ ನಿಲ್ಲದು ಸೌಂ । ದರಿಯ ನಿಲ್ಲುವದಲ್ಲ ॥
ಹರಣವು ಮಿಂಚಿನ ಪರಿಯೆಂಬುದೆ ದಿಟ।ಕರದ ವ್ರಣಕೆ ಕೈಪಿಡಿಬೇಕಿಲ್ಲ ॥ ೨ ॥

ಹುಟ್ಟಿ ಬೆಳೆದು ಮಾರ್ಪಟ್ಟು ಕುಂದಿ ಕೈ।ಬಿಟ್ಟು ಪೋಪುದೆಲ್ಲ ॥
ಗುಟ್ಟನಿದನು ಗುರುತಿಟ್ಟು ತಿಳಿಯದೇ । ಕಟ್ಟಕಡೆಗೆ ಕೊರಗುವರಲ್ಲ ॥ ೩ ॥

ದೇಹೇಂದ್ರಿಯಗಳೊಳಾತ್ಮ ಬೇರ್ಪಡದೇ। ತಾ ಹುದುಗಿಹನಲ್ಲ ॥
ಈ ಹದನನು ತಿಳಿದಾತ್ಮ ನಿತ್ಯನೆಂ।ದೂಹಿಸಲಾರದೆ ಇಹರಲ್ಲ ॥ ೪ ॥

ಮಡಕೆಯ ಮಾರ್ಪಾಡುಗಳದ ನೋಡುವ।ನೆಡೆಗೆ ಸೇರ್ವುವಿಲ್ಲ ॥
ಜಡದೇಹಾದಿಯನೋಳ್ಪಾತುಮನದ । ಕೊಡೆಯನಿದನು ಶಂಕರ ಬಲ್ಲ ॥ ೫ ॥

[ಸತ್ತುಚಿತ್ತುಸುಖಿ—ಸಚ್ಚಿತ್ಸುಖಿ. ಸಚ್ಚಿದಾನಂದಸ್ವರೂಪನಾದ ಪರಮಾತ್ಮ, ಅಂಡಲೆ—ಮೇಲೆಬೀಳು, ಆಸಕ್ತಿಯಿಡು. ೨. ಹರೆಯ—ಪ್ರಾಯ. ಹರಣ—ಪ್ರಾಣ. ಕೈಪಿಡಿ—ಕನ್ನಡಿ. ೩. ಈ ಚರಣದಲ್ಲಿ ಭಾವ(ಪದಾರ್ಥಗಳಿಗೆ ಆಗುವ) ವಿಕಾರಗಳನ್ನು ಹೇಳಿದೆ ; ಹುಟ್ಟಿ—ಎಂದಾದಮೇಲೆ ಅಸ್ತಿ (ಇರುವದು) ಎಂಬುದನ್ನೂ ಸೇರಿಸಿಕೊಳ್ಳ ಬೇಕು. ಕಟ್ಟಕಡೆಗೆ—ಕೊನೆಗೆ, ವಸ್ತುವು ನಾಶವಾದಾಗ. ೪. ಬೇರ್ಪಡದೆ—ಬೇರೊಂದು ರೂಪವನ್ನು ತಳೆಯದೆ, ಅದೇ ರೂಪದಿಂದ. ಹುದುಗಿಹನು—ಸೇರಿಕೊಂಡಿರುವನು. ಹದನನು—ರೀತಿಯನ್ನು, ಈ ನುಡಿಯಲ್ಲಿ ಆತ್ಮನು ಅವಿಕಾರಿ ಎಂದು ಪ್ರತಿಜ್ಞಾಮಾತ್ರ ದಿಂದ ಹೇಳಿದೆ ; ಮುಂದಿನ ನುಡಿಯಲ್ಲಿ ಇದಕ್ಕೆ ಸಾಧಕವಾದ ಯುಕ್ತಿಯನ್ನು ಹೇಳಿದೆ. ೫. ಸೇರ್ವುದಿಲ್ಲ—ಸೇರಿರುವುದಿಲ್ಲ. ಜಡವಾದ ದೇಹಾದಿಗಳು ಮಾರ್ಪಡುತ್ತಿರುವವು, ಅವುಗಳನ್ನು ನೋಡುತ್ತಿರುವ ಸಾಕ್ಷಿಯಾದ ಆತ್ಮನು ಅವಕ್ಕೆ ಒಡೆಯನು, ಎಂದರೆ ಸ್ವತಂತ್ರನು ; ಅವುಗಳ ಮಾರ್ಪಾಡುಗಳಿಂದ ಅವನಲ್ಲಿ ಯಾವ ವಿಶೇಷವೂ ಆಗುವದಿಲ್ಲ]

# ಬಿಡು ಬಿಡು ಜಗದ ಸಡಗರವೆಲ್ಲ

**ದೇಶಿತೋಡಿ** **ಆದಿತಾಳ**

ಬಿಡು ಬಿಡು ಜಗದ ಸಡಗರವೆಲ್ಲ ।
ಕೊಡುವದೇನಿಲ್ಲ । ಶಾಂತಿಯನ್ನು ॥ ಪ ॥
ಹೊಲ ಮನೆ ಹಣವು ಮಹದಧಿಕಾರ ।
ಹೊಲೆಯು ಸಂಸಾರ ತಿಳಿದು ನೋಡು ॥೧॥
ಹೆಂಡತಿ ಮಗನು ಮಾವನಳಿಯು । ಖಂಡದ ಗೆಳೆಯರಲ್ಲದೇನು ? ॥೨॥
ವಿದ್ಯೆಯು ಬುದ್ಧಿಕೌಶಲವೆಲ್ಲ । ಗುದ್ದಿದ ಕಲ್ಲ ಪ್ಪೋಲ್ವವಲ್ಲ ॥೩॥
ಶಂಕರಪದವ ನಂಬಲು ನೀನು । ಶಂಕೆಯದೇನು ? ಶಾಂತಿಯಹುದು ॥೪॥

[ಗುದ್ದಿದ ಕಲ್ಲ ಪ್ಪೋಲ್ವುವು–ಕಲ್ಲನ್ನು ಗುದ್ದಿದಷ್ಟು ನೋವಾಗುವಂತೆ ಜಗತ್ತಿನ ವಿಷಯದ ವಿದ್ಯಾಬುದ್ಧಿಕೌಶಲಗಳು ಹೆಚ್ಚಿದಷ್ಟು ಕಾಮಕ್ರೋಧಾದಿಗಳು ಹೆಚ್ಚುವವು]

# ಮೂರೇ ದಿನಕೇ ಸ್ಥಲವು

**ಹುಸೇನಿ** **ಆದಿತಾಳ**

ಮೂರೇ ದಿನಕೇ ಸ್ಥಲವು । ದೊರಕುವ ಛತ್ರವಿದಣ್ಣ ।
ಹೋಗಡಬೇಕು ಬಂದವರು । ಇರುವದಕೆಡೆಯಿಲ್ಲಣ್ಣ ॥ಪ॥

ಇರುವದಕೆಡೆಯಿಲ್ಲಣ್ಣ–ಮರಣವು ನಿಶ್ಚಿತವಿದಕೆ
ಬರಿದೇ ಹಗೆತನವೇಕೆ–ಬರಿದೇ ಪ್ರೀತಿಯದೇಕೆ ?
ಸರುವರೊಳೀಶನ ಕಾಣು– ಹರಿ ನಿನ್ನಲಿ ತಿಳಿ ಜೋಕೆ
ಗರುವವದೇತಕೆ ಮಾಣು–ಇರುವೀ ಮೂರೇ ದಿನಕೆ ॥೧॥

ಇರುವೀ ಮೂರೇ ದಿನಕೆ–ಭರವಸೆಯಿಲ್ಲ ಪರಾಕೆ
ಬರುವರು ಬಹಳವಿರುವರು–ಬರಿದೇ ಕರೆಕರೆಯೇಕೆ ? ।
ಹೋಗಡಲಿಕನುವಾಗಿರು ನೀ–ಕರೆ ಬರುವದು ದಿನದಿನಕೆ
ಹರಿಯನು ನೆನೆವುತ ಹೊರಡು–ಬರುವದು ಶಾಂತಿಯು ಮನಕೆ ॥೨॥

ಮನಕೆ ಶಾಂತಿ ಬಹುದಣ್ಣ–ಮನೆಯನು ಸ್ವಚ್ಛವಿಡಣ್ಣ
ನನದೆಂಬುದ ಮರೆಯಣ್ಣ–ಜನರ ಸೇವೆಯೆಸಗಣ್ಣ ।
ಘನಶಂಕರ ಗತಿಯಣ್ಣ–ಬಿನುಗುಬುದ್ಧಿ ಬಿಡು ಮುನ್ನ
ನಿನ ಸಂಸಾರದ ಬಣ್ಣ–ದಿನಮೂರರ ಬಾಳಣ್ಣ ॥೩॥

[ಬಿನುಗುಬುದ್ಧಿ–ಅಲ್ಪಬುದ್ಧಿ. ಈ ಜಗತ್ತು ಒಂದು ಛತ್ರದಂತೆ ಇದೆ, ಇದು ನಮ್ಮದಲ್ಲ ; ಇಲ್ಲಿ ನಾವು ಎಂದಿಗೂ ಇರುವಂತೆಯೂ ಇಲ್ಲ. ಇಲ್ಲಿ ನಾನು, ನನ್ನದು ಎಂಬ ಅಭಿಮಾನವನ್ನು ಬಿಟ್ಟು, ಸೇವಾಬುದ್ಧಿಯಿಂದ ಪರೋಪಕಾರವನ್ನು ಮಾಡುತ್ತಿದ್ದರೆ ಮಂಗಲಕರನಾದ ಪರಮಾತ್ಮನನ್ನೇ ಸೇರಿಕೊಳ್ಳುವೆವು.]

## ನಂಬದಿರೆಲವೊ ಮಾನವನೆ

**ಸುರಟಿ** (ಮಂಗಲ ರಾಮೇಶ್ವರಗೆ) **ಆಟತಾಳ**

ನಂಬದಿರೆಲವೊ ಮಾನವನೆ । ಇದ
ನಂಬಿ ಪಡುವೆ ಬಲುಭವಣೆ ॥ಪ॥

ನಂಬುವರೇ ಮಣ್ಣ ಬೊಂಬೆ ಈ ದೇಹವ ।
ನಂಬಿಸಿ ಸೌಖ್ಯದ ಹಂಬಲ ಬಿಡಿಪುದ ॥ಅ॥

ಎಲ್ಲಿಂದಲೊ ಬಂದಿಹುದು । ಮತ್ತಿ
ದೆಲ್ಲಿಗೊ ಹೋಗುತಲಿಹುದು ।
ಇಲ್ಲಿಯೇ ಇರುವೆನೆಂದೆಲ್ಲರ ನೆಚ್ಚಿಸಿ ।
ಮೆಲ್ಲನೆ ಮರೆಯಾಗಿ ನಿಲ್ಲುವ ತನುವಿದ ॥ ॥೧॥

ತಾಯ ಬಳಿಯಲಿ ತೋರುವದು । ಮತ್ತೆ
ಜಾಯೆಯ ಕೆಲಕೆ ಸಾರುವದು ॥
ಆಯಾಸದ ಮುದಿನಾಯ ಮಾಡುವದಿಂತು ।
ಮಾಯದೆ ಮುಳುಗಿಪ ಹೇಯಕಾಯವನಿದ ॥೨॥

ಒಗೆವ ಕಾಂತಿಯಲಿ ಮೆರೆವದು । ಮತ್ತೆ
ಬಿಗಿವ ದರ್ಪದಲಿ ಬೆರೆವುದು ॥
ಹಗರಣಬಡಿಸಿ ಚೆಂಬೊಗರ ಚೆಲ್ವೆಯರಿಂ।
ದೊಗಡಿಪ ದುರಿತದೆ ಹೊಗಿಪ ದೇಹವನಿದ ॥೩॥

ಮಿಥ್ಯಾಭೋಗವನೆ ತೋರುವದು । ಕೃತ್ಯಾ
ಕೃತ್ಯದರಿವನು ಮೀರುವದು ॥
ನಿತ್ಯವಿದೆಂಬುವ ಮರ್ತ್ಯರ ಭವದಲಿ ।
ಸುತ್ತಿಸಿ ಕೊಲ್ಲುವ ಮೃತ್ಯುವೊಡಲನಿದ ॥೪॥

ಶಂಕೆಯಿಲ್ಲದೆ ಓಡಾಡುವದು । ಪಾಪಾ
ತಂಕವನೊಡ್ಡಿ ಕಾಡುವದು ।
ಶಂಕರನೊಲುಮೆಯ ಸೋಂಕ ತಪ್ಪಿಸಿ ತಾನು ।
ಬೆಂಕಿಯ ಬೀಳುವ ಮಂಕಿನಾಕೃತಿಯಿದ ॥೫॥

[ ೧. ಭವಣೆ–ಭ್ರಮಣೆ. ಹಂಬಲ–ಆಸೆಯನ್ನು. ೨. ಜಾಯೆ–ಹೆಂಡತಿ, ಕೆಲ–ಹತ್ತಿರ. ೩. ಬೆರೆ–ಗರ್ವಿಸು, ಚೆಂಬೊಗರ–ಕೆಂಪುಕಾಂತಿಯ, ಒಗಡಿಪ-ಓಕರಿಸುವ, ಅಸಹ್ಯವಾದ. ೪. ಒಡಲು–ಶರೀರ. ೫. ಮಂಕಿನಾಕೃತಿ–ಅಜ್ಞಾನದ ಶರೀರ.]

## ಸುಳ್ಳಿನ ಜಗವಿದು ಸುಳ್ಳಿನ ಸಂತೆಯು

**ಮಾಯಾಮಾಳವಗೌಳ** **ಆದಿತಾಳ**

ಸುಳ್ಳಿನ ಜಗವಿದು ಸುಳ್ಳಿನ ಸಂತೆಯು । ನಿಲ್ಲುವದಲ್ಲವು ಸವಿಗನಸು ।
ಸುಳ್ಳನು ನೆಚ್ಚುತ ಕುಳ್ಳಿರಬೇಡಿರಿ ನಿಲ್ಲಲಿ ದೇವನೊಳೇ ಮನಸು ॥೧॥

ಒಬ್ಬನೆ ಬರುವನು ಒಬ್ಬನೆ ಹೋಗುವ । ನೊಬ್ಬರಿಗೊಬ್ಬರು ಇಲ್ಲಿಲ್ಲ ।
ಒಬ್ಬರ ಹಿಡಿಯುತಲುಬ್ಬಿರಬೇಡಿರಿ । ಬೊಬ್ಬಿಡುವಿರಿ ನಿಜ ಕೊನೆಗೆಲ್ಲ ॥೨॥

ಏನನು ತಂದಿಹಿರೇನನೊಯ್ವಿರಿ ? ಶ್ವಾನನಂತೆ ಬೊಗಳಾಡುವಿರಿ ।
ನಾನುನನ್ನದೆಂಬೀ ಬುದ್ಧಿಯ ಬಿಡಿ । ಮಾನಸಶುದ್ಧಿಯ ಕೂಡುವಿರಿ ॥೩॥

ಸುಳ್ಳಿನ ತನುವಿದ ನಂಬುತಲೇತಕೆ । ಜಳ್ಳುಸಂಸ್ಕೃತಿಗೆ ಜೋಲುವಿರಿ ?
ಕಳ್ಳರು ಇಂದ್ರಿಯಮುನಗಳು ನಿಮ್ಮನು । ಕೊಳ್ಳೆಹೊಡೆಯಲಳುತೇಳುವಿರಿ ॥೪॥

ತೋರಿಹಾರುವೀ ಮಾಯುವ ತ್ಯಜಿಸಿರಿ । ಪಾರಮೇಶ್ವರವ ಭಜಿಸುತಿರಿ ।
ಸೇರಿರಿ ಶಂಕರತೀರವ ನಿಜಮೃತಿ । ದೂರರಾಗುವದೆ ಕಡೆಯು ಗುರಿ ॥೫॥

[೫. ಪಾರಮೇಶ್ವರ–ಪರಮೇಶ್ವರ ತತ್ತ್ವವನ್ನು. ಶಂಕರತೀರ–ಆನಂದವೆಂಬ ದಡ. ಜನಿಮೃತಿ–ಹುಟ್ಟುವದು, ಸಾಯುವದು.]

## ಮಾಯಾಪಾಶದ ಬಂಧದೆ ಬರಿದೆ

**ಹುಸೇನಿ** **ಆದಿತಾಳ**

ಮಾಯಾಪಾಶದ ಬಂಧದೆ ಬರಿದೇ ॥ ನೋಯದಿರೆಲವೋ ಮಾನವ ॥ಪ॥

ಮಾಯಾತೀತ ನೀನಾಗುವ ಪರಮೋ । ಪಾಯವ ಮಾಡೆಲೋ ಮಾನವ ॥ಅ॥

ಈ ಲೋಕದ ಪರಲೋಕದ ಸುಖದೊಳು । ಲೋಲನಾಗದಿರೋ ಮಾನವ ॥
ಮೇಲೆ ಮೇಲೆ ನೀನಿದರ ದೋಷಗಳ । ನಾಲೋಚಿಸುತಿರೋ ಮಾನವ ॥೧॥

ರಾಗದ್ವೇಷದ ಸೆಳೆತಕೆ ಸಿಲ್ಕದೆ । ಜಾಗರೂಕನಿರೋ ಮಾನವ ।
ನೀಗಿ ಮೋಹದಾವರಣವ ನಿಲ್ವ ಸು । ಯೋಗವನರಸೋ ಮಾನವ ॥೨॥

ನೈಯೆನುತಡಿಯಿಡೆ ಮಾಯುವಾಗುವವು । ಹೇಯವಿಷಯವಿವು ಮಾನವ
ಛೀಯೆನ್ನುತ ಹಿಂದಿರುಗಲು ಬೆನ್ನೊಳೆ । ನಾಯಂತೆ ಬಹವು ಮಾನವ ॥೩॥

ಪಡೆದೊಡೆ ದುಃಖವು ಪಿಡಿದೊಡೆ ದುಃಖ ಕೈ । ಬಿಡಲುರೆ ದುಃಖವು ಮಾನವ ।
ಕೆಡದಿರು ವಿಷಯದ ಗೊಡವೆಗೆ ಹೋಗಿ ಸಂ । ಗಡಿಪುದು ಸಂಕಟ ಮಾನವ ॥೪॥

ಇಂದ್ರಜಾಲವೀ ಸರ್ವಪ್ರಪಂಚ ನಿ । ಸ್ತಂದ್ರಿಯೊಳಿದ ತಿಳಿ ಮಾನವ ।
ಇಂದ್ರಿಯಗಳ ಗೆಲು ಶಂಕರ ಗುರುಪರ । ಸಾಂದ್ರ ಭಕುತಿಯೊಳೇ ಮಾನವ ॥೫॥

[೩. ಸರಿ ಎಂದು ಮುಂದಕ್ಕೆ ಹೆಜ್ಜೆಯಿಟ್ಟರೆ ಕಾಣದಾಗುವವು ; ಅಸಹ್ಯದಿಂದ ಹಿಂತಿರುಗಿದರೆ ಅವು ಹಿಂದೆಯೇ ಬರುವವು. ೪. ಉರೆ–ಹೆಚ್ಚಾದ ; ಸಂಗಡಿಪುದು–ಬಂದುಸೇರಿಕೊಳ್ಳುವದು. ೫. ನಿಸ್ತಂದ್ರಿಯೊಳು–ಆಲಸ್ಯವಿಲ್ಲದೆ. ಸಾಂದ್ರಭಕುತಿ–ಗಾಢವಾದ ಭಕ್ತಿ.]

## ಬಿಡುವನೆಂದಿಗೆ ನೀ ಕಾಣ್ಬೆ

**ಮುಖಾರಿ** **ಆದಿತಾಳ**

ಬಿಡುವನೆಂದಿಗೆ ನೀ ಕಾಣ್ಬೆ । ಮನುಜ ॥ಪ॥

ಕಡುತಾಪವೆಂದಿಗೆ ಮಾಣ್ಬೆ । ಮನುಜ ॥ಅ॥

ಬೆಳಗಿನಿಂದ ಬೈಗಿನ ಪರಿಯಂತ । ಮನುಜ
ಮುಳುಗಿರ್ಪೆ ಕಾರ್ಯದೊಳಿಂಥ ।
ಬಳಿವೋಗಿ ಸಂತರ ಪಂಥ ।
ತಳೆದಂದು ಶಾಂತಿಯನಂತ । ಮನುಜ ॥೧॥

ಪಲವಾತನಾಡುತಲಿಪ್ಪೆ । ಮನುಜ
ಬಲ ಕುಂದೆ ಬರ್ಪುದು ಮುಪ್ಪೇ ।
ಒಲಿ ದೇವನಾಮಕೆ ಬೆಪ್ಪೆ ।
ಹಲಿಸೋದರನೆ ನೀನಪ್ಪೆ । ಮನುಜ ॥೨॥

ಮನದಲ್ಲಿ ಯೋಚನೆ ಮಾಳ್ಪೆ । ಮನುಜ
ಜನುಮಂಗಳೆನಿತನು ನೋಳ್ಪೆ ? ।
ಕುಣಿದೇಕೆ ಭೋಗವ ಬೇಳ್ಪೆ ? ।
ನೆನೆ ಶಂಕರಾತ್ಮನ ಬೆಳ್ಪೆ ॥೩॥

[ಬಿಡುವನು-ವಿರಾಮವನ್ನು. ೧. ಬೈಗು-ಸಂಜೆ. ೨. ಪಲವಾತನು-ಬಹಳ ಮಾತನ್ನು. ಹಲಿಸೋದರ-ಕೃಷ್ಣ, ೩. ಬೇಳ್ಪೆ-ಬೇಡುವೆ, ಬೆಳ್ಪೆ-ಬೆಪ್ಪೆ.]

## ಬರಿದೆ ತೊಳಲದಿರು ಮನವೆ

### (ಮನವೇ ಮರೆವರೇನೋ ಹರಿಯ)

**ಕಾಂಬೋಧಿ** **ಅಟತಾಳ**

ಬರಿದೆ ತೊಳಲದಿರು ಮನವೆ । ಧರ
ಧರದ ಜನ್ಮವನೊಂದುವದು ಜಾಣತನವೆ ? ॥ಪ॥

ಮರಹು ನಿದ್ದೆಯ ಗೆಲು ನೀನು ಬರಿ ।
ಮರಗಿಡವಾಗಿ ಬೆಳೆದು ಫಲವೇನು ? ।
ತೆರೆದು ಕಂಗಳ ನೋಡುತಿನ್ನು ಬಿಡ ।
ದೊರಸು ಸತ್ಕರ್ಮದಿ ತಾಮಸವನ್ನು ॥೧॥

ತೊರೆ ಕೋಪತಾಪವನೆಲ್ಲ । ಹಂದಿ
ನರಿನಾಯಿಯಾಗಿ ಬಾಳ್ವುದು ತರವಲ್ಲ ।
ಹರಿತತ್ತ್ವವನು ಹೇಳಬಲ್ಲ । ಸಜ್ಜ ।
ನರ ಸೇರಿದರೆ ರಜೋಗುಣ ಸೋಂಕದಲ್ಲ ॥೨॥

ಸಾತ್ತ್ವಿಕನೆನೆ ಓಗ್ಗಲೇಕೆ । ಶ್ರೋತ್ರಿ ।
ಯತ್ವದ ಜನುಮಂಗಳಿರುತಿರೆ ಸಾಕೆ ? ।
ತತ್ತ್ವವ ತಿಳಿಯಲು ಬೇಕೆ । ಶಂಕರ ।
ರತ್ನವೆ ಶುದ್ಧಸಾತ್ತ್ವಿಕವೆನು ಜೋಕೆ ॥೩॥

[೧, ಮರಹುನಿದ್ದೆ-ಅಜ್ಞಾನನಿದ್ರೆ. ಸತ್ಕರ್ಮದಿಂದ ತಮಸ್ಸನ್ನೂ ಸತ್ಸಂಗದಿಂದ ರಜಸ್ಸನ್ನೂ ಜ್ಞಾನದಿಂದ ಸತ್ತ್ವವನ್ನೂ ಮೀರಬಹುದು.]

## ಇನಿತು ದಿನ ವನಜನಾಭನ

ಷಣ್ಮುಖಪ್ರಿಯೆ ರೂಪಕ

ಇನಿತು ದಿನ ವನಜನಾಭನ ನೆನಹದಿಲ್ಲದೇ
ಕೊನೆದು ಕುಣಿಯಿತು ಮನವು ಕೊಬ್ಬಿನಿಂದ ।
ಕನಸುಗಳ ನಿಚ್ಚವೆಂದೆಣಿಸಿತಯ್ಯೋ । ನಿಜವ-
ನಣುಮಾತ್ರವರಿಯದಿಹ ಮಬ್ಬಿನಿಂದ ॥೧॥

ಮೈಗೆಣ್ಣೆಮಜ್ಜನವು ಸುಯ್ಗೆ ಗಂಧವು ಹೂವು
ಕೈಗೆ ಚಿನ್ನದ ಕಡಗ ಹಣೆಗೆ ಬೊಟ್ಟು ।
ಬೀಗಿ ಬಿರ್ರನೆ ಶಿರವ ಬಾಗದೇ ಗುರುವಿಂಗೆ
ಸಾಗಿತಹ ! ಜವ್ವನವು ಮೇರೆಗೆಟ್ಟು ॥೨॥

ಕಂಡೆಡೆಗೆ ತಿರುಗುತ್ತ ಕಂಡವರ ಕೆಣಕುತ್ತ
ಪ್ರಂಡುಮಾತಿನಲಿ ನಾಲಗೆಯ ನಿಲಿಸಿ ।
ಉಂಡುಟ್ಟುದೇ ಸತ್ಯವೆಂದು ಮೈಮರೆತೆನೇ
ಭಂಡಬಾಳಿನಲಿ ಜೀವನವ ಬೆಳಸಿ ॥೩॥

ಈಸು ದಿನವಾದುದಾಯ್ತೇಸು ಮರುಗಿದರೇನು
ಹೇಸಿದೆನು ವಿಷಯದೀ ಬೀಸುವಲೆಗೆ ।
ನಾ ಸಿಲ್ಕೆನಿನ್ನು, ಪರವಾಸುದೇವನ ನೆನೆವೆ
ಮೀಸಲಹೆನೀಗ ಶಂಕರನ ನೆಲೆಗೆ ॥೨॥

[ಕೊನೆದು-ಗರ್ವದಿಂದ, ಸ್ವೇಚ್ಛಾಜೀವನದಿಂದ ದಃಖವೇ ಹೊರತು ಸುಖವಿಲ್ಲ ಭಗವಂತನನ್ನು ಸ್ಮರಿಸಿದರೆ ಸದ್ಗತಿಯುಂಟು.]

## ಎಲೆ ಜೀವ ಬಲುಯೋನಿಗಳಲಿ

**ಸೌರಾಷ್ಟ್ರ** **ಆಟತಾಳ**

ಎಲೆ ಜೀವ ಬಲುಯೋನಿಗಳಲಿ ತೊಳಲಿ ಬಂದೆ ಅದರಿಂದೇನಾಯ್ತು ?
ತಿಳಿವಿನ ನರಜನ್ಮಕಿಳಿತಂದೆ ಕಡೆಗೀಗಲದರಿಂದೇನಾಯ್ತು ॥೧॥

ಬ್ರಾಹ್ಮಣನೆಂದೆಂಬ ಹಮ್ಮ ತಳೆದು ನಿಂದೆ ಅದರಿಂದೇನಾಯ್ತು ?
ಒಮ್ಮೆ ವೇದವನೆಲ್ಲ ಬಿಮ್ಮನೆ ಪಠಿಸಿದೆ ಅದರಿಂದೇನಾಯ್ತು ? ॥೨॥

ಕಾವ್ಯಶಾಸ್ತ್ರಕ್ಕೆಲ್ಲ ಸುವ್ಯಾಖ್ಯೆಯ ಗೈದೆ ಅದರಿಂದೇನಾಯ್ತು ?
ಶ್ರಾವ್ಯಗೀತವ ಚಿತ್ರದಿವ್ಯಶಿಲ್ಪವ ಕಲ್ತೆ ಅದರಿಂದೇನಾಯ್ತು ? ॥೩॥

ಧನಕುಲವಿದ್ಯೆ ರೂಪಿನ ರಾಶಿ ಜನಬುವದರಿಂದೇನಾಯ್ತು ?
ಇನಿಯಳು ಸುತ ಹೊಲಮನೆಜಸವೆಗ್ಗಳ ಅದರಿಂದೇನಾಯ್ತು ? ॥೪॥

ವನಕೈದಿ ತಪದಲಿ ತನುವ ದಂಡಿಸಿ ನಿಂದೆ ಅದರಿಂದೇನಾಯ್ತು ?
ಮುನಿಯಾಗಿ ಮೂಗಿನ ಕೊನೆಯ ನಿಟ್ಟಿಪೆನೆಂದೆ ಅದರಿಂದೇನಾಯ್ತು ?

ಕಾಷಾಯದಂಡಾದಿವೇಷವಾಂತೆಯಲ್ಲ । ಅದರಿಂದೇನಾಯ್ತು ?
ದೇಶಿಕಪದದಲಿ ಲೇಶಭಕುತಿಯಿಲ್ಲ ಅದರಿಂದೇನಾಯ್ತು ? ॥೬॥

ಶಿರುಳ ಬಿಸುಟು ಬರಿ ಕರಟವ ಹಿಡಿದೆ ನೀನದರಿಂದೇನಾಯ್ತು ?
ಗುರುಶಂಕರೈಕ್ಯವ ದೊರಕಿಸಿಕೊಳೆ ಪರಪುರುಷಾರ್ಥವಾನಾಯ್ತು ? ॥೭॥

[ಜೀವನು ಪಾಪಪುಣ್ಯಗಳಿಗೆ ಅನುಗುಣವಾಗಿ ದೇವತಾದಿಗಳಲ್ಲಿಯೂ ಸ್ಥಾವರ ಜಂಗಮಯೋನಿಗಳಲ್ಲಿಯೂ ಮನುಷ್ಯಯೋನಿಗಳಲ್ಲಿಯೂ ಹುಟ್ಟುತ್ತಾನೆ. ಮನುಷ್ಯ ಜನ್ಮದಲ್ಲಿ ಶಾಸ್ತ್ರೋಕ್ತವಾದ ವರ್ಣಾಶ್ರಮಕರ್ಮಗಳನ್ನು ಮಾಡಿದ್ದರಿಂದ ಬರುವ ಫಲ ಕ್ಕಿಂತಲೂ ಸದ್ಗುರುಬೋಧನೆಯಿಂದ ಜ್ಞಾನವನ್ನು ಪಡೆದುಕೊಂಡಾಗ ಸಿಕ್ಕುವ ಮೋಕ್ಷವೇ ಹೆಚ್ಚಿನ ಪುರುಷಾರ್ಥವು. ]

## ಶಮದಮಸುಖಸಂಪತ್ತಿ

### [ ಏಕನ್ಮ ಸಂಶಯ ಜಾನಕಿ ]

**ಮೋಹನ** **ಅಟತಾಳ**

ಶಮದಮಸುಖಸಂಪತ್ತಿ । ಇರೆ । ಶಮಿತವಾಗದೆ ಸಂಸಾರಾರ್ತಿ ॥ಪ॥

ಶಮಿಜನಕೆಲ್ಲಿಯ ಭೀತಿ ? । ನೆರೆ ನೋಡೆ । ಶಮನನೆ ನಡುಗುವನಿದು ।
ಶಾಸ್ತ್ರೋದಿತನೀತಿ ॥ಅ॥

ವಾಜಿಯ ಕಡಿವಾಣದಿಂದ । ಸೆಳೆ । ದೋಜೆಯಿಂ ನಡೆಸುವನಂದ ।
ಮಾಜದಿಂದ್ರಿಯಗಳ ಸಂದ । ನೆರೆಹಿಡಿ । ದೀ ಜಗದೊಳು ವೀರನೆನಿಪಬಾಳುವೆಯಿಂದ॥೧॥

ಒಳಗೆ ಮನವ ಹಿಡಿಯುತ್ತೆ । ಭೋಗ । ಗಳ ಯೋಚನೆಯ ಬದಿಗೊತ್ತೆ ।
ಚಳಿ ಸೆಖೆ ಸುಖ ದುಃಖ ಮತ್ತೇ । ನೆನ್ನದೆ ।ಬೆಳೆದ ತಿತಿಕ್ಷೆಯ ಸುಳಿವ ಸುಖವು ಮುತ್ತೆ ॥೨॥

ಗುರುಶಾಸ್ತ್ರ ಬೋಧೆಯ ನೆಚ್ಚಿ । ಮನ । ದುರುಸಂಶಯವನೆಲ್ಲ ಕೊಚ್ಚಿ ।
ಶರೀರದ ಭಾನವು ತುಚ್ಛೀ । ಕೃತವಾಗೆ । ಪರಮಶಂಕರ ಸುಖದಲಿ ತನ್ನ ಮುಚ್ಚಿ ॥೩॥

[ಪ. ಶಮಿತವಾಗದೆ ಸಂಸಾರಾರ್ತಿ-ಸಂಸಾರದ ಕಷ್ಟವು ನಾಶವಾಗುವದಿಲ್ಲವೆ ? ಶಮಿಜನ_ಮನೋನಿಗ್ರಹವುಳ್ಳವರು, ಸಂನ್ಯಾಸಿಗಳು. ಶಮನನೆ-ಯಮನೇ, ಶಾಸ್ತ್ರೋ

ದಿತರೀತಿ–ಶಾಸ್ತ್ರೋಕ್ತವಾದ ನಿಜದ ಪ್ರಕಾರವು. ೧. ವಾಜಿ–ಕುದುರೆ, ಕಡಿವಾಣ ಲಗಾಮು, ಓಜೆ-ಕ್ರಮ, ನಡೆಸುವನಂದ - ನಡೆಸುವವನಹಾಗೆ, ಮಾಜದೆ-ಮುಚ್ಚು ಮರೆಯಿಲ್ಲದೆ ಸಂದ–ಮರ್ಮವನ್ನು. ೨. ಮುತ್ತೆ–ವ್ಯಾಪಿಸಿಕೊಳ್ಳಲಾಗಿ. ೩. ನೆಚ್ಚಿ– ಶ್ರದ್ಧೆಯಿಂದ ಅನುಸರಿಸಿ, ಶಂಕರಸುಖ–ಆತ್ಮಾನಂದ.]

## ಜೀವನವೆಂಬೀ ಸೆಳೆವಿನ ನದಿಯಲಿ

**ದೇಶಿತೋಡಿ** **ಆದಿತಾಳ**

ಜೀವನವೆಂಬೀ ಸೆಳೆವಿನ ನದಿಯಲಿ ಭಾವಭಕುತಿಯೇ ದೋಣಿ ।
ಜೀವರನೆಲ್ಲರ ಸುಖದಲಿ ದಾಟಿಪ ದೇವನ ಮರೆವರೆ, ಪ್ರಾಣಿ ? ॥೧॥

ಮೆಲ್ಲಮೆಲ್ಲಗೇ ನಡೆಯಲು ದೋಣಿಯದೆಲ್ಲಿಹನವನೆಂದೆಂಬೆ ।
ನಿಲ್ಲದೆ ನಡೆವುದು ತನಗೆತಾನೆ ಇದಕಿಲ್ಲವಂಬಿಗನೆ ಎಂಬೆ ॥೨॥

ನಾನೇ ಅಂಬಿಗ, ನಾನೇ ಒಡೆಯನು, ನಾನೇ ಹುಟ್ಟನು ಹಾಕಿ ।
ದೋಣಿಯು ಮುಂದಕೆ ಸಾಗುವದೆಂದಭಿಮಾನವ ತಳೆದಿಹೆ, ಜೋಕೆ ! ॥೩॥

ಬಂದಿತು ತೋರದ ತೊರೆಯೆನ್ನುತ ಕಳೆಗುಂದುವೆಯೇತಕೆ ಪ್ರಾಣಿ ?
ಹಿಂದಕೆ ಸರಿ, ಇದೊ ಬಂದನು ದೋಣಿಗ ಮುಂದಕೆ ನಡೆಯಿತು ದೋಣಿ ॥೪॥

ಅಂಬಿಗನಾಸನದಲಿ ಕುಳ್ಳಿರದಿರು ತುಂಬಿತಹಂಕರಜಲವು ।
ದಂಭವ ಬಿಸುಡುತ ಜೀವನದೊಡೆಯನ ನಂಬಲು ಶಂಕರಬಲವು ॥೫॥

[ಈ ನಮ್ಮ ಜೀವನವೆಂಬುದು ಒಂದು ಸೆಳವಿನ ನದಿಯಿದ್ದಂತೆ : ಇದನ್ನು ದಾಟುವದಕ್ಕೆ ದೈವಭಕ್ತಿ ಎಂಬ ದೋಣಿಯನ್ನು ಬಳಸಿಕೊಳ್ಳಬೇಕು. ಜೀವನವು ಸಲೀಸಾಗಿ ಸಾಗುವಾಗ ನಾಸ್ತಿಕನಾಗಬಾರದು, ಹೆಚ್ಚಿನ ಕಷ್ಟವು ಬಂದೊದಗಿತೆಂದು ಕುಗ್ಗಲೂ ಬಾರದು. ಅಹಂಕಾರವನ್ನು ಬಿಟ್ಟು ಭಾವಭಕ್ತಿಯಿಂದ ಭಗವಂತನನ್ನು ಭಜಿಸುತ್ತಿದ್ದರೆ ಈ ಸಂಸಾರವನ್ನು ದಾಟುವ ಬಲವು ದೊರಕುತ್ತದೆ. ]

## ಹರೇ ರಾಮ ಹರೇ ರಾಮ

**ಸಾವೇರಿ** **ಆದಿತಾಳ**

ಹರೇ ರಾಮ ಹರೇ ರಾಮ । ರಾಮ ರಾಮ ಹರೇ ಹರೇ ।
ಹರೇ ಕೃಷ್ಣ ಹರೇ ಕೃಷ್ಣ । ಕೃಷ್ಣ ಕೃಷ್ಣ ಹರೇ ಹರೇ ॥ಪ॥

ಕಲಿಸಂಸಾರವ ದಾಟುವದಕೆ । ನಿ। ರ್ಮಲಸಾಧನವಿಹುದೀ ಮಂತ್ರ ।
ಒಲಿಯಲು ನಾರಾಯಣಭಗವಂತನ । ನೆಲೆಯನು ತೋರುವದೀ ಮಂತ್ರ ॥೧॥

ನಾರದನಿಗೆ ನಾಲ್ಮೊಗ ಪೇಳಿದ ಶ್ರುತಿ । ಸಾರವು ಗೋಪ್ಯವು ಈ ಮಂತ್ರ ।
ಧೀರರು ವೇದಗಳೆಲ್ಲವ ಪರಿಕಿಸಿ । ಸಾರಿಹ ಸರ್ವೋತ್ತಮ ಮಂತ್ರ ॥೨॥

ಕಾಲದೇಶವಿಧಿನಿಯಮಗಳಿಲ್ಲ ತ್ರಿ। ಕಾಲವು ಜಪಿಸುವದೀ ಮಂತ್ರ ।
ಸಾಲೋಕ್ಯಾದಿವಿಮುಕ್ತಿ ಚತುಷ್ಟಯ। ವೇ ಲಭಿಸುವ ಸುಖತರ ಮಂತ್ರ ॥೩॥

ಮೂರುಕೋಟಿ ಕೋಟ್ಯರ್ಘವ ಜಪಿಸಲು । ಭೂರಿಪಾಪನಾಶಕ ಮಂತ್ರ ।
ಮೇರೆಯಿಲ್ಲದಿಹ ಸುಖಸಾಮ್ರಾಜ್ಯವ । ಸೂರೆಗೊಡುವ ಶಂಕರ ಮಂತ್ರ ॥೪॥

[೧. ಒಲಿಯಲು-ವೀರ್ಯವತ್ತಾಗಲಾಗಿ, ಇದರ ಸಿದ್ಧಿಯಾದರೆ ; ನೆಲೆ-ಇರುವ ಸ್ಥಲ, ತತ್ತ್ವ. ೨. ನಾರದಗೆ ನಾಲ್ಮೊಗ ಪೇಳಿದ-ಬ್ರಹ್ಮನು ಹೀಗೆ ನಾರದರಿಗೆ ಉಪದೇಶಿಸಿದನೆಂದು ಕಲಿಸಂತರಣೋಪನಿಷತ್ತಿನಲ್ಲಿದೆ. ೩. ಸಾಲೋಕ್ಯಾದಿ-ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ. ೪. ಸುಖಸಾಮ್ರಾಜ್ಯ-ಆನಂದ ಸ್ವರೂಪಪ್ರಾಪ್ತಿರೂಪವಾದ ಮುಕ್ತಿ.]

# ಎಲ್ಲಾ ಧರ್ಮವ ಕೈಬಿಟ್ಟು

**ಧನಾಸರಿ** **ಆದಿತಾಳ**

ಎಲ್ಲಾ ಧರ್ಮವ ಕೈಬಿಟ್ಟು-ಒಮ್ಮನದಲಿ ದೇವನ ಮುಟ್ಟು ।
ಎಲ್ಲಾ ಪಾಪವ ಸುಡಿಗುಂಟ್ಟು । ಇದುವೇ ಧರ್ಮದ ಒಳಗುಟ್ಟು ॥ಪ॥

ಕರ್ಮಗಳೆಲ್ಲವ ನೀ ಮಾಡು । ಕರ್ಮದ ಸಂಗವನೀಡಾಡು ।
ಕರ್ಮಗಳೊಡೆಯನ ಕೊಂಡಾಡು । ಕರ್ಮದ ಮರ್ಮವು ಇದೆ ನೋಡು ॥೧॥

ಚಿತ್ತದ ಪರಿದಾಟವನೆಲ್ಲ । ನಿತ್ತರಿಸಲು ನಿನ್ನಳವಲ್ಲ ।
ಚಿತ್ತಜನಯ್ಯನ ಜಾನಿಸಲಾ । ಚಿತ್ತವೆ ಚಿತ್ತಾಗುವದಲ್ಲ ॥೨॥

ಎಲ್ಲೆಲ್ಲಿಯು ದೇವನ ಕಾಣು । ಸಲ್ಲದ ಭೇದವನೀ ಮಾಣು ।
ನಿಲ್ಲಿಸು ಅವನೊಳೆ ಪ್ರೇಮವನು । ಘಲ್ಲಿಸು ಮರವೆಯನಿದೆ ಜಾಣು ॥೩॥

ಆತನನುಳಿದಿನ್ನೇನಿಲ್ಲ । ಆತುಮನಾತನೆ ಜಗಕೆಲ್ಲ ।
ಆತನೆ ನೀನೈ ಬೇರಿಲ್ಲ । ನೀ ತಿಳಿ ಶಂಕರವಹುದೆಲ್ಲ ॥೪॥

[ಹುಡಿಗುಟ್ಟು-ಪುಡಿಯಾಗುವಂತೆ ಕುಟ್ಟು, ನಾಶಮಾಡು. ೧. ಸಂಗವ-ನನ್ನದೆಂಬ ಅಭಿಮಾನವನ್ನು; ಈಡಾಡು - ನಾಶಮಾಡು, ಕರ್ಮಗಳೊಡೆಯ-ಕರ್ಮವನ್ನು ಮಾಡುವದಕ್ಕೂ ಫಲಕ್ಕೂ ಒಡೆಯನಾದ ಈಶ್ವರ. ೨. ನಿತ್ತರಿಸಲು-ದಾಟುವದಕ್ಕೆ, ಸಹಿಸಿಕೊಳ್ಳುವದಕ್ಕೆ, ನಿನ್ನಳವಲ್ಲ-ಅಧೀನವಲ್ಲ, ಚಿತ್ತವೆಚಿತ್ತಾಗುವದು-ಚಿತ್ತವು ತನ್ನ ಸ್ವರೂಪವನ್ನು ಬಿಟ್ಟು ಚಿದ್ರೂಪನಾದ ಆತ್ಮನಲ್ಲಿ ಕರಗಿ ಹೋಗುವದು. ೩. ಘಲ್ಲಿಸು ನಾಶಮಾಡು, ಮರವೆ-ಅಜ್ಞಾನ .೪ .ಶಂಕರವಹುದೆಲ್ಲ-ಎಲ್ಲವೂ ಸುಖಕರವಾಗುತ್ತದೆ]

## ರಾಮ ರಾಮ

### ("ಪಾಹಿ ಪದ್ಮಬಂಧು ನೇತ್ರ" ಎಂಬ ಧಾಟಿ)

ರಾಮ ರಾಮ ರಾಮ ರಾಮ, ರಾಮ ರಾಮ ಎನ್ನಿರಿ ।
ಕ್ಷೇಮವಿತ್ತು ಪೊರೆವ ರಾಮನಾಮವನ್ನು ಬಿಡದಿರಿ ॥ಪ॥

ಜಾತಿವರ್ಣಕುಲಗಳೆಂಬ ಹೆಮ್ಮೆಯನ್ನು ಕಳೆಯಿರಿ ।
ಪ್ರೀತಿಯಿಂದಲೆಲ್ಲರನ್ನು ಕಾಂಬುದೊಂದ ಕಲಿಯಿರಿ ॥
ಮಾತುಮಾತಿಗೊಮ್ಮೆ ರಾಮನಾಮವುಚ್ಚರಿಸಿರಿ ।
ಭೀತಿಯಿಲ್ಲವಿನ್ನು ಮೇಲೆ ಪುಕರಾದೆವೆನ್ನಿರಿ ॥೧॥

ಧ್ಯಾನ ಮೌನವರಿಯದಿದ್ದರೇನು ? ಚಿಂತೆಪಡದಿರಿ ।
ನಾನು, ನೀನು-ಎಂಬ ಭೇದಬುದ್ಧಿಯನ್ನು ತೊಡೆಯಿರಿ ॥
ದೀನಬಂಧು ರಾಮನವನ ನಾಮವುಚ್ಚರಿಸಿರಿ ।
ಹಾನಿವೃದ್ಧಿಯಿಲ್ಲದಿರುವ ತಾಣವನ್ನೆ ಪಡೆಯಿರಿ ॥೨॥

ಹಣವು ವಿದ್ಯೆ, ಹರೆಯ ಬಲವು ಹೋಣೆಯೆ ? ನೀವೆ ನೋಡಿರಿ ।
ಕ್ಷಣದಿ ಮಾಯವಾಯ್ತು ರಾವಣನ ಸಿರಿಯದಾಪರಿ ॥
ಗುಣದ ಗನಿಯು ರಾಮನವನ ನಾಮವುಚ್ಚರಿಸಿರಿ ।
ಎಣಿಕೆಯಿಲ್ಲದನಿತು ಕಾಲ ಸುಖದಿ ಸಂಚರಿಸಿರಿ ॥೩॥

ಹಿಂದೆ ಗೈದ ಪಾಪಕಾಗಿ ಮನದೆ ಬೆದರಬೇಡಿರಿ ।
ಕುಂದು ಕೊರತೆಯೆಲ್ಲ ಮನ್ನಿಸೆಂದು ಬಾಗಿ ಬೇಡಿರಿ ॥
ಒಂದೆ ಮನದೆ ಬಿಡದೆ ರಾಮನಾಮವುಚ್ಚರಿಸಿರಿ ।
ಅಂದು ಬೇಡ ಮೌನಿಯೆನಿಸಿದಂದವನ್ನೆ ಸ್ಮರಿಸಿರಿ ॥೪॥

ಪತಿತಪಾವನವು ರಾಮನಾಮವೆಂದು ನಂಬಿರಿ ।
ಸತತ ನಾಮಭಕುತಿಯನ್ನು ಹೃದಯದೊಳಗೆ ತುಂಬಿರಿ ॥
ಗತಿಯು ರಾಮನಾಮವೊಂದೆ ಬಿಡದೆ ಉಚ್ಚರಿಸಿರಿ ।
ವ್ರತವಿದೊಂದ ಹಿಡಿದು ಶಂಕರಸಮಾನರೆನಿಸಿರಿ ॥೫॥

[೧. ಪೂತರಾದೆವು-ಪವಿತ್ರರಾದೆವು. ೨, ತೊಡೆಯಿರಿ-ಅಳಿಸಿಹಾಕಿರಿ, ತಾಣ-ಸ್ಥಾನ. ೩, ಪರಿಯ-ಪ್ರಾಯ. ೪. ಬೇಡ ಮೌನಿಯಾದ-ಬೇಡನು ವಾಲ್ಮೀಕಿಯಾದ ಅಂದವನ್ನು-ರೀತಿಯನ್ನು.]

## ಸಕ್ಕದವೆ ಬೇಕೆಂಬ

**ಆನಂದಭೈರವಿ** **ಝಂಪೆ**

ಸಕ್ಕದವೆ ಬೇಕೆಂಬ ಕಕ್ಕುಲಿತೆಯೇತಕೋ ।
ಮಿಕ್ಕ ನುಡಿಗಳ ದೇವನರಿಯನೇನು ।
ಎಕ್ಕತುಳ ಭಕುತಿಯಲಿ ಬೇಡಿದರೆ ಪೊರೆಯನೇ ? ।
ಮಕ್ಕಳಲ್ಲವೆ ನೀವು ಮಾದೇವಗೆ ? ॥೧॥

ಜಾತಿಯಲಿ ಕೆಳಗೆಂಬ ಕಾತರವದೇತಕೋ ।
ನೀತಿಯೊಂದಿರೆ ದೇವನೊಲಿಯನೇನು ?
ಪ್ರೀತಿ ಮಿಗೆ ಭಕುತಿಯಲಿ ಭಜಿಸುತ್ತಲಿರುವನೆ ।
ನ್ಯಾತುಮನೆ ಎನ್ನನೇ ಭಗವಂತನು ? ॥೨॥

ಗುಡಿಮಸೀದಿಗಳೆಂಬ ಹೊಡೆದಾಟವೇತಕೋ ।
ಅಡಿಯಿಡನೆ ದೇವನುಳಿದೆಡೆಯೊಳೇನು ?

ಎಡೆಬಿಡದ ಭಕುತಿಯಲಿ ಪೊಡಮಡುವರೆದೆಯೊಳೇ
ಬಿಡದೆ ಮನೆಮಾಡನೇ ಜಗದೊಡೆಯನು ? ॥೩॥

ಹಿಂದುಮುಸ್ಲಿ ಮಕ್ರೈಸ್ತದಂದುಗವದೇತಕೋ ।
ಒಂದೊಂದು ಮತಕೊಬ್ಬ ದೇವನೇನು ?
ಒಂದೆ ಭಕುತಿಯಲಿ ಶರಣೆಂದವರ ಬಂಧು ತಾ ।
ಹಿಂದುಮುಂದಿನ ಮತವ ಕೇಳ್ವನೇನು ? ॥೪॥

ಎಲ್ಲವನು ಬಲ್ಲ ನಮ್ಮೆಲ್ಲರಾ ಬಲ್ಲಹನ ।
ದೆಲ್ಲರನು ಸಲಹುವನು ಸರ್ವಾತುಮ ।
ಇಲ್ಲವಾತನ ಭಕುತರಲ್ಲಿ ಕೀಳ್ಮೇಲುಗಳು
ಸೊಲ್ಲನಿದನಾಲಿಸಿರಿ ಶಂಕರವಿದು ॥೫॥

[೧. ಸಕ್ಕದ-ಸಂಸ್ಕೃತ, ಕಕ್ಕುಲಿತೆ-ವ್ಯರ್ಥವಾದ ಆಸೆ, ಎಕ್ಕತುಳ-ಹೆಚ್ಚಿನ ೨. ಕಾತರ–ಮನಸ್ಸಿನ ಕಳವಳ, ೩, ಪೊಡಮಡುವ-ನಮಸ್ಕರಿಸುವ, ಎದೆಯೊಳೆ–ಹೃದಯದಲ್ಲಿಯೇ. ೪. ದಂದುಗ-ಮನಸ್ಸಿನ ಗಲಿಬಿಲಿ. ೫. ಬಲ್ಲಹ-ವಲ್ಲಭ, ಭಾಷೆ ಜಾತಿ, ದೇವಾಲಯ, ಮತಭೇದ–ಯಾವ ಭೇದವೂ ಈಶ್ವರನಿಗೆ ಇಲ್ಲ ; ಎಲ್ಲರಿಗೂ ಅವನು ದೇವನು. ಅವನ ಭಕ್ತರಾದವರಲ್ಲಿ ಯಾವ ತಾರತಮ್ಯವೂ ಇಲ್ಲ.]

## ಭಯಪಡಲೇಕೆ

**ಮೋಹನ** **ಆದಿತಾಳ**

ಭಯಪಡಲೇಕೆ ನಿರ್ಭರದಿ ಭಜಿಸು ಶೌ।
ರಿಯ ಪದಪದ್ಮಗಳ ॥ಪ॥

ಹಯವದನನ ಭಜನೆಯಲಿ ನೀಂ ಸುಖಿಪ ನಿ।
ಶ್ಚಯಹೃದಯದೊಳಿರಲಿ ಬಂದದ್ದು ಬರಲಿ

ವಾಯುವಹ್ನಿಯು ಸೂರ್ಯ ಬೀಯದರೊಡೆಯ ಮ ।
ತ್ಯಾಯುಮನಿವರು ನಿರ್ಮಾಯದಲಿ ॥
ಶ್ರೀಯರಸನ ಕಟ್ಟಾಯದಾಣತಿಯನು ।
ಜೀಯೆಂದು ನಡೆಸುವರು ನೇಮದೊಳಗವರು ॥೧॥

ಕಾಮಿತದಾತನ ನಾಮವ ನೆನೆಯುತಿ ।
ಹಾ ಮನುಜರ ಯೋಗಕ್ಷೇಮವನು ॥
ಮಾಮನೋಹರ ನಮ್ಮ ಕಾಮಜನಕ ಭಕ್ತಾ ।
ರಾಮನೆ ವಹಿಸುವನು ಭಯವಿನ್ನೇನು ? ॥೨॥

ಮಾಡಿದುದೆಲ್ಲವ ಬೇಡದೆ ಫಲವ ।
ಗಾಢವರ್ಪಿಸೆ ಭಕ್ತ ಶಂಕರನು ॥
ಹೂಡಿದ ವ್ರತವ ಕೈಗೂಡಿಸಿ ಲೋಕ ಕೊಂ ।
ಡಾಡುವ ವೋಲಪನು ಮುದ್ದಾಡುವನು ॥೩॥

[ನಿರ್ಭರದಿ–ತಾತ್ಪರ್ಯದಿಂದ, ಶೌರಿ–ಕೃಷ್ಣ, ಭಗವಂತ. ೧. ಬೀಯದರು–ಸಾವಿಲ್ಲದವರು, ದೇವತೆಗಳು ; ಕಟ್ಟಾಯದ ಆಣತಿಯನು-ಕಟ್ಟುನಿಟ್ಟಾದ ಆಜ್ಞೆಯನ್ನು ೨. ಭಕ್ತಾರಾಮ-ಭಕ್ತರೊಳಗೆ ಆಡುತ್ತಿರುವವನು. ೩, ಗಾಢವರ್ಪಿಸೆ-ದೃಢಭಕ್ತಿಯಿಂದ ಅರ್ಪಿಸಲು.]

## ಶಿವಾ, ಶಿವಾ, ಪರಮಾತ್ಮ ಶಿವಾ

**ಪಂತುವರಾಳಿ** **ಆಟತಾಳ**

ಶಿವಾ, ವಾಶಿ, ಪರಮಾತ್ಮ ಶಿವಾ । ಶಿವಾಧವಾ, ನಿಖಿಲಾತ್ಮ ಶಿವಾ ಒಳ ॥ ಪ ॥
ಅರಿವಲ್ಲದ ಅರಿವೆ, ಶಿವಾ । ಹೊರ ಅರಿವಲ್ಲದ ಅರಿವೆ, ಶಿವಾ । ಒಳಹೊರ
ಅರಿವನು ಹೆಪ್ಪರಿವನು ಬಿಟ್ಟರಿವು ಮರವೆಯುಳಿದರಿವೆ, ಶಿವಾ ॥೧॥

ಕರಣಕೆ ನಿಲುಕದ ಇರವೆ, ಶಿವಾ । ಕುರುಹಿಡಲೀಯುವ ಇರವೆ, ಶಿವಾ
ಅರಿವು ಮಾತು ಗೋಚರಿಸಬಲ್ಲ । ವ್ಯವಹರಣೆಯ ದಾಟಿಪ ಪರವೆ, ಶಿವಾ ॥೨॥

ತಾನೇತಾನೆಂಬರಿವೆ ಶಿವಾ । ಮಾನಾಗೋಚರದಿರವೆ ಶಿವಾ ।
ಸ್ಥಾನಸ್ಥಾನಿವಿಭೇದವನಳುಪಿಹ । ಸ್ವಾನಂದಾಮೃತಸಾರ ಶಿವಾ ॥೩॥

ಶಾಂತಾಶಿವವಿಖ್ಯಾತ ಶಿವಾ । ಧ್ವಾನ್ತಾತೀತಾದ್ವೈತ ಶಿವಾ ।
ಭ್ರಾಂತಿಸಿದ್ಧಸಂಖ್ಯಾತ್ಮತುರ್ಯವೇ । ದಾಂತವೇದ್ಯ ಶಂಕರನೆ ಶಿವಾ ॥೪॥

[ಶಿವಾಧವ–ಪಾರ್ವತೀಪತಿ, ನಿಖಿಲಾತ್ಮ-ಎಲ್ಲಕ್ಕೂ ಆತ್ಮ ೧, ಒಳಅರಿವು– ಕನಸಿನ ಜ್ಞಾನ, ಹೊರ ಅರಿವು-ಎಚ್ಚರ ಜ್ಞಾನ, ಹೆಪ್ಪರಿವು–ನಿದ್ರೆಯ ಜ್ಞಾನ, ಅರಿವು ಮರವೆಯುಳಿದ–ಜ್ಞಾನಾಜ್ಞಾನವಿಶೇಷವಿಲ್ಲದ. ೨. ಕರಣಕೆ ಇಂದ್ರಿಯಕೆ, ಕುರುಹಿಡಲು- ಗುರುತುನೋಡಿ ಊಹಿಸುವದಕ್ಕೆ; ಅರಿವು ಮಾತು ಗೋಚರಿಸಬಲ್ಲ-ಮನಸ್ಸೂವಾಕ್ಕೂ ವಿಷಯವಾಗಿಸಿಕೊಳ್ಳಬಲ್ಲ, ೩. ತಾನೇತಾನೆಂಬರಿವು-ಅದ್ವಿತೀಯಜ್ಞಾನ, ಸ್ಥಾನಸ್ಥಾನಿ ಭೇದ-'ಅವಸ್ಥೆ' ಅವಸ್ಥೆಯನ್ನನುಭವಿಸುವವನು ಎಂಬ ಭೇದ, ೪, ಶಾಂತಾಶಿವಾ– ಅಮಂಗಲವನ್ನು ನಾಶಪಡಿಸಿರುವವನು ; ಧ್ವಾಂತಾತೀತ- ಅಜ್ಞಾನವನ್ನು ಮೀರಿರುವ ಭ್ರಾಂತಿಸಿದ್ಧಸಂಖ್ಯಾತ್ಮತುರ್ಯ - ಭ್ರಾಂತಿಯಿಂದ ತೋರುವ ಮೂರು ಆತ್ಮರಿಗೆ ನಾಲ್ಕನೆಯವನು. ]

## ಹರಹರಾ, ಹರನೆ, ಶರಣು

**ದೇಶಿತೋಡಿ** **ಝುಂಪೆ**

ಹರಹರಾ, ಹರನೆ, ಶರಣು । ಹರ, ಮೂರು ಪುರವ ಸುಟ್ಟವನೆ, ಶರಣು।
ಸರುವರಾ ಹೃದಯದಲ್ಲುರಿವ ಚಿಜ್ಜ್ಯೋತಿಯೇ । ಪರಮಪ್ಪೂರುಷನೆ ಶರಣು ॥ ॥೧॥

ಇಂದುಶೇಖರನೆ, ಶರಣು । ಕರೆಗೊರಲಿ । ನಿಂದ ಹೊಳೆಯುವನೆ, ಶರಣು ।
ಕಂದರ್ಪನಾಟಗಳನೊಂದೆ ಕುಡಿನೋಟದಲಿ । ನಂದಿಸಿದ ಶೂಲಿ, ಶರಣು ॥೨॥

ಶಂಭು ಶಂಕರನೆ, ಶರಣು । ನಂಬಿದರ । ಬೆಂಬಿಡದ ಭಾಗ್ಯ ಶರಣು ।
ಹೊಂಬೆಟ್ಟದಾ ಹಿಡಿಯೆ, ತುಂಬಿದಾ ವೈರಾಗ್ಯ ।ಮುಂಬರಿವ ಹೊನಲೆ ಶರಣು ॥೩॥

ಭೋಗಿಭೂಷಣನೆ ಶರಣು । ನೆಲೆನಿಂದ । ಯೋಗವಾಂತವನೆ ಶರಣು ।
ಭೋಗವೂ ಮೋಕ್ಷವೂ ಬಾಗಿದರ ಸೂರೆ ಎಂ!ಬಾ ಗಿರಿಜೆಯಾಣ್ಮ ಶರಣು ॥೪॥

ನಂದಿವಾಹನನೆ ಶರಣು । ಜಗಕೆಲ್ಲ । ತಂದೆಯಾಗಿಹನೆ ಶರಣು ।
ಅಂದಿಂದು ಮುಂದೆಂಬುದೊಂದಿಲ್ಲದಾ ನಿತ್ಯ । ಬಂಧು ಶಂಕರನೆ ಶರಣು ॥೫॥

[೨. ಕರೆಗೊರಲು-ವಿಷದ ಕರೆಯಿಂದ ಕೂಡಿರುವ ಕಂಠ. ೩. ಹೊಂಬೆಟ್ಟ— ಮೇರುಪರ್ವತ, ಮುಂಬರಿವ ಹೊನಲು-ಹರಿಯುತ್ತಿರುವ ಹೊಳೆ. ೪. ನೆಲೆನಿಂದ– ನಿಶ್ಚಲವಾದ, ಗಿರಿಜೆಯಾಣ್ಮ-ಪಾರ್ವತೀಪತಿ, ಬಾಗಿದರೆ-ನಮಸ್ಕರಿಸಿದವರೆ ೫ ಅಂದಿಂದು ಮುಂದೆಂಬುದಿಲ್ಲದ–ಕಾಲತ್ರಯವನ್ನು ಮೀರಿರುವ.]

# ನಿನ್ನ ನಾಮಕೆ

**ತೋಡಿ** **ಆದಿತಾಳ**

ನಿನ್ನ ನಾಮಕೆ ಸರಿ । ಯಿನ್ನಾವುದ ಕಾಣೆ ।
ಎನ್ನ ಜೀವನವಯ್ಯ, ನಿನ್ನ ನಾಮ ॥ಪ॥

ಹೃದಯವ ಸಮನಿಸಿ । ಸೊದೆಯನೀಂಟಿಸುವದು
ಮಧುರಕೆ ಮಧುರವು–ನಿನ್ನ ನಾಮ ॥೧॥

ಬಲವನು ಕೊಟ್ಟು ಸಂ। ಕಲಪಕೆ ದೈವಿಕ
ಬಲವನಿಂಬಿಡುವದು ನಿನ್ನ ನಾಮ ॥೨॥

ಚಿತ್ತವ ಬೆಳಗುತ । ಉತ್ತಮದ ದಿನತಂ ।
ಬುತ್ತಿಹ ಬೆಳಕಿದು ನಿನ್ನ ನಾಮ ॥೩॥

ಅಮರನ ಮುಕುತನ । ನಮಿತಾನಂದನ ಗೈವ
ವಮಮ ! । ಶಂಕರವಿದು–ನಿನ್ನ ನಾಮ ॥೪॥

[೧. ಸಮನಿಸಿ–ಸರಿಪಡಿಸಿ, ಸೊದೆಯ-ಅಮೃತವನ್ನು, ಈಂಟಿಸುವದು-ಕುಡಿಸುವದು. ೨. ಸಂಕಲಪಕೆ–ಸಂಕಲ್ಪಕ್ಕೆ. ಇಂಬಿಡುವದು–ಆಶ್ರಯವಾಗಿ ಮಾಡಿಕೊಡುತ್ತದೆ, ಕೂಡಿಸಿಡುತ್ತದೆ.]

# ಸತ್ಯಚಿತ್ಸುಖಾತ್ಮದೇವ

**ತೋಡಿ** **ತ್ರಿಶ್ರಏಕತಾಳ**

ಸತ್ಯಚಿತ್ಸುಖಾತ್ಮದೇವ ನಿತ್ಯನಿರ್ಮಲ । ಪರಮ ।
ಸತ್ಯಧರ್ಮಗಮ್ಯ ಸರ್ವಸಾಕ್ಷಿ ಕೇವಲ ।
ನಿತ್ಯಶುದ್ಧಬುದ್ಧಮುಕ್ತ ಶಂಕರಾತ್ಮನೆ । ನಿರತ ।
ವಿತ್ತು ಪಾದಭಕುತಿಯನ್ನು ಪೊರೆ ಮಹಾತ್ಮನೆ ॥೧॥

ಜಗದ ಜನುಮವಿರವು ಹೊಂದು ನಿನ್ನಧೀನವು । ನಿತ್ಯ ।
ನಿಗಮವೆಲ್ಲ ನಿನ್ನನರಿವ ಪರಮಮಾನವು ।

ಬಗೆಯ ಮಾತ ಮೀರ್ದ ನಿನ್ನ ಹೊಗಳಲೆಳಸುವ । ಎನ್ನ ।
ಮುಗುಧಮತಿಯ ಮನ್ನಿಸುತ್ತ ಕಾವುದೈ ಭವ ॥೨॥

ಓರ್ವನಾಗಿರುತ ನಾಮರೂಪವೆಲ್ಲ । ಹಡೆದು ।
ಸರ್ವರೂಪನೆನಿಸಿ ತೋರ್ಪ ಪರಿಯ ಬಲ್ಲವ ॥
ಶರ್ವರೂಪ ಬಿಡದೆ ಸಂಸಾರಿಯೆನಿಸುವ । ಯೋಗಿ ।
ಯೋರ್ವ ನೀನೆ ನಿನ್ನನರಿವೆನೆಂತು ನಾಂ ಶಿವ ? ॥೩॥

ಕರ್ಮಭಕ್ತಿಯೋಗವೈರಾಗ್ಯಸಾಧನ।ದಿಂದ ।
ನಿರ್ಮಲಾತ್ಮನಾಗೆ ಮುಕುತಿಯೆಂಬರೀ ಜನ ॥
ನಿಮ್ಮ ನಾಮ ನಾಲಗೆಯಲಿ ಇರದೆ ಅನುದಿನ । ವ್ಯಾಘ್ರ ।
ಚರ್ಮಧರನೆ ಕುನ್ನಿಮನಕದಾವ ಸಾಧನ ? ॥೪॥

ಪಂಚಕೋಶಗಳನು ಮೀರಿ ಸಕಲಜೀವರ । ಹೃದಯ ।
ಮಂಚದೊಳಗೆ ಪವಡಿಸಿರುವ ಪುರುಷ ಪುರಹರ ॥
ಪಂಚವಿಷಯಗಳಿಗೆ ದಾಸರಾಗಿ ಬೇವರು । ನಿನ್ನ ।
ಸಂಚನರಿವೆವೆಂತು ? ಪೇಳು ನಾವು ಜೀವರು

ಎಚ್ಚರಿದ್ದು ವಿಷಯಭೋಗವುಂಡು ಕನಸಿನ । ಜಗವ ।
ನೆಚ್ಚಿ ಬಯಲ ಕಾಮಗಳನು ಸವಿವ ಮನಸಿನ ॥
ಹುಚ್ಚನಾಗಿ ಗಾಢನಿದ್ರೆಯಲ್ಲಿ ಸೇರುವ । ಶಂಕ ।
ರೋಚ್ಚರೂಪಿನರಿವೆಯಿತ್ತು ಬದುಕಿಸೈ ಭವ ॥೬॥

[೨. ಹೊಂದು–ನಾಶ, ನಿಗಮ–ಶಾಸ್ತ್ರ, ವೇದಾಂತ. ಬಗೆಯ-ಮನಸ್ಸನ್ನು ೩. ಪರಿಯ-ರೀತಿಯನ್ನು, ಶರ್ವರೂಪ-ಶಂಕರರೂಪವನ್ನು. ೪. ಕುನ್ನಿಮನ-ನಾಯಿ ಯಂತೆ ಅಲೆದಾಡುವ ಮನಸ್ಸು. ೫. ಪವಡಿಸಿರ್ಪ-ಮಲಗಿರುವ, ಸಂಚ–ಉಪಾಯ ವನ್ನು, ದೂರದೃಷ್ಟಿಯನ್ನು. ೬. ಶಂಕರೋಚ್ಚರೂಪಿನ–ಮಂಗಲಕರವಾದ ಹೆಚ್ಚಿನ ಸ್ವರೂಪದ. ಅರಿವೆ–ತಿಳಿವಳಿಕೆ.]

# ಕೈಗಳನು ದೇವ ನೀಡೆಮಗೆ

ಕಾಂಬೋಧಿ ರೂಪಕ

ಕೈಗಳನು ದೇವ ನೀಡೆಮಗೆ । ಬೈಗುಂಬೆಳಗೂ ನಿನ್ನ ಪೂಜೆಗೈವ ॥

ಮನೆಯನ್ನು ದಾಟಿ ಬೀದಿಯನೂರ ಪಟ್ಟಣದ
ಜನರನ್ನು ದಾಟಿ ಭೂಮಿಯೊಳಿರುತಿಹ ॥
ಮನುಜರನು ದಾಟುತ್ತ ಸರುವ ಭೂತಂಗಳನು
ಕೊನೆದೆಳೆದು ತಬ್ಬಿ ತಣಿಯುವ ಸೈಪಿನ ॥೧॥

ಧೀರಕೃತ್ಯವನೆಸಗಿ ದೀನರಲಿ ದಯೆಗೈದು
ಘೋರಭಯವನು ಬಿಡಿಸಿ ಸಂತೈಸುವ ॥
ದಾರಿದಪ್ಪಿದ ಕುರುಡರನು ದಾರಿಗೆಳೆತರುವ
ಸಾರಿ ಬಡವರಿಗೀವ ಕಡು ಸುಕೃತದ ॥೨॥

ಹೊಲಗದ್ದೆಗಳನುಳುವ ಫಲವೃಕ್ಷಗಳ ಬೆಳೆವ
ಜಲಕಾಗಿ ಕೆರೆಬಾವಿಗಳ ತೋಡುವ ॥
ಹಲವು ಬಗೆಯಲಿ ಪೆರರಿಗಾಗಿ ಮೈನೋಯಿಸುವ
ಹಲಧರನ ನೆನಹನೀಯುವ ಪುಣ್ಯವ ॥೩॥

ಮನೆಮಾರ ಕಟ್ಟಿಸುವ ಧನಧಾನ್ಯವನು ಗಳಿಸಿ
ಮನೆಗೆ ಬಂದತಿಥಿಗಳನುಪಚರಿಸುವ ॥
ಘನಮಹಿಮ ನಿನ್ನ ತತ್ತ್ವವನೊರೆವ ಗ್ರಂಥಗಳ
ದಿನದಿನವು ಬರೆದು ನಲಿಯುವ ಮೋದದ ॥೪॥

ಹಿರಿಯರನು ಸೇವಿಸುವ ಕಿರಿಯರನು ಹರಸುವಾ
ಸರಿಗರನು ಕೂರ್ಮೆಯಿಂ ನೋಡಿ ನಲಿವ ॥
ಹಿರಿದುಕಿರಿದೆಂಬ ಭೇದವನೊರಸಿ ಶಂಕರನೆ,
ಸರುವರಲಿ ನಿನ್ನ ಪೂಜಿಪ ಭಾಗ್ಯದ ॥೫॥

[೧. ಕೊನೆದು—ಹೆಮ್ಮೆಯಿಂದ, ಸೈಪಿನ-ಪುಣ್ಯದ. ೩. ಹಲಧರನ-ಬಲರಾಮನ
೫. ಸರಿಗರನು-ಸಮಾನರನ್ನು, ಕೂರ್ಮೆಯಿಂ—ಸ್ನೇಹದಿಂದ.]

## ಇವರೇ ಹಿರಿಯುವರು

ರೇಗುಪ್ತಿ ಆದಿತಾಳ

ಇವರೇ ಹಿರಿಯುವರು । ಲೋಕದೊ । ಳಿವರೇ ಹಿರಿಯುವರು ॥ಪ॥

ಸತ್ಯವ ಬಿಡದಿಹರು । ಅಸತ್ಯಕೆ । ಮೃತ್ಯುವೆಂದೆನಿಸಿಹರು ।
ಕೃತ್ಯಾಕೃತ್ಯವಿವೇಕವ ನಡೆಯೊಳು ।
ನಿತ್ಯ ತೋರಿ ಪುರು । ಷೋತ್ತಮರೆನಿಪರು ॥೧॥

ಧರ್ಮಕೆ ನೆರೆಯುಹರು । ಬರು ಹೆಮ್ಮೆಯು । ಕರ್ಮಕೆ ಮರೆಯುಹರು ।
ಹಮ್ಮನುಳಿಯುವಾ ಕರ್ಮಯೋಗದೊಳ
ಮರ್ಮವ ಲೋಕಕೆ ಕೆಮ್ಮನೆ ಸಾರುವ । ರಿವರೇ ॥೨॥

ಗರುವವನುಳಿದಿಹರು । ಪರರೇಳಿಗೆ । ಗಿರದೆ ಹಿಗ್ಗುತಿಹರು ।
ಧರೆಯುಪಕಾರಕೆ ತುರುವ ಕಾಯ್ದು ಶ್ರೀ ।
ಹರಿಯ ಪೋಲ್ವ ಶಂಕರಚರಿತರು ಧರೆ । ಗಿವರೇ ॥ ॥೩॥

[೨. ನೆರೆ–ಸಹಾಯ, ಹಮ್ಮನು-ಅಹಂಕಾರವನ್ನು, ಕೆಮ್ಮನೆ-ಸುಮ್ಮನೆ. ೩. ಉಳಿದಿಹರು–ಬಿಟ್ಟಿರುವವರು- ತುರು-ಹಸು, ಶಂಕರಚರಿತರು-ಮಂಗಲವಾದ ನಡತೆಯುವರು.]

## ನುಡಿ ಹರಿನಾಮುವನೇ

[ಪಿಬರೇ ರಾಮುರಸಂ ರಸನೇ]

ಜಂಝೂಟಿ ಆದಿತಾಳ

ನುಡಿ ಹರಿನಾಮುವನೇ । ರಸನೆ ॥ಪ॥

ನುಡಿ ಹರಿನಾಮುವನಡಿಗಡಿಗೊಲಿದು ನೀ ।
ಹಿಡಿಯೊಂದು ನೇಮುವನೇ ರಸನೆ ॥ಅ॥

ಬಿಡು ಬೀಳುಮಾತಿನ । ಬೆಡಗಿಗೆ ಸೋಲ್ವುದ ।
ಕಡಿ ಪಾಪದಾಮುವನೇ । ರಸನೆ ॥೧॥

ಬಿಗಿಹಿಡಿ ಬಾಷ್ಪದ । ಸೊಗವ ಸವಿವಾಸೆಯು ।
ಹೊಗು ರಸಧಾಮುವನೇ । ರಸನೆ ॥೨॥

ನಾಮುವೆ ಶಂಕರ । ಪ್ರೇಮರಸಾಯನ ।
ಕಾಮಿಸೀ ಕಾಮುವನೇ । ರಸನೆ ॥೩॥

[೧. ಪಾಪದಾಮು–ಪಾಪವೆಂಬ ಹಗ್ಗ, ಕಡಿ-ಕತ್ತರಿಸು ; ಬೀಳುಮಾತುಗಳು ಪಾಪದ ಮೂಲವೆಂಬ ಭಾವ. ೨. ಸೊಗವ-ಸುಖವನ್ನು, ರಸಧಾಮು–ರುಚಿಯ ಸ್ಥಾನ, ಪರಮಾತ್ಮನ ನಾಮ.]

## ನಾಲಗೆಯೇ

**ಬೇಹಾಗ್**

ನಾಲಗೆಯೇ, ಹರಿನಾಮಾಮೃತವನು ಕುಡಿಕುಡಿ ಬೇಗ । ಕುಡಿಕುಡಿ ಬೇಗ ॥ಪ॥
ನಾಳೆ ನಾಡಿದು ಎನಬೇಡ, ಕೆಡಬೇಡ । ನಾಲಗೆಯೇ ॥ಅ॥

ಸವಿಸವಿಯೂಟವ । ಸವಿದೊಡದೇನೋ ॥
ಸವೆಯಲು ತೇಜವು ಸಪ್ಪೇ, ಛೀ ಬೆಪ್ಪೇ । ನಾಲಗೆಯೇ ॥೧॥

ರುಚಿಯೆಲ್ಲಕೆ ರುಚಿ, । ಶುಚಿ, ಬಲಕಾರಿ ॥
ಉಚಿತವೆ ಬಿಡುವದು ನೋಡು, ತ್ವರೆಮಾಡು । ನಾಲಗೆಯೇ ॥೨॥

ಪಂಕ ಬಿಡಿಸುವದು । ಸಂಕಟಹಾರಿ ॥
ಶಂಕರ ಪಾವನ ಗೈದ, ಶಿವನಾದ । ನಾಲಗೆಯೇ ॥೩॥

[೧. ತೇಜವು-ಸವಿನೋಡುವ ಬಲ]

## ನಾಮಸ್ಮರಣೆ ಮಾಡಿ

**ಮುಖಾರಿ** [ಮಂದರಗಿರಿಧರನೆ] **ಆದಿತಾಳ**

ನಾಮಸ್ಮರಣೆ ಮಾಡಿ । ಭಗವನ್ನಾಮ ॥ಪ॥
ನಾಮವೆ ಪರಸುಖ । ಧಾಮುವಮುದು ಕಡು ।
ನೇಮದಿನಿದ ಕೂಡಿ । ಭಗವನ್ನಾಮ ॥ಅ॥

ಪಾಪಕರ್ಮ ನಿ । ರ್ಲೇಪರಾಗಿ ಹ್ಯ।ತ್ಮಾಪವ ಪುಡಿಮಾಡಿ ॥೧॥

ಕಾಮಕರ್ಮಗಳಿ । ಗೇ ಮನಗೊಡದಿಹ । ನಾಮವ ಬಿಡಬೇಡಿ ॥೨॥

ಹಮ್ಮ ಕಳೆವ ಪರ । ಬೊಮ್ಮ ಶಂಕರನ । ನೊಮ್ಮೆ ನೆನೆದು ನೋಡಿ ॥೩॥

[ಪರಸುಖ–ಮೋಕ್ಷದ ಆನಂದ. ೧. ನಿರ್ಲೇಪರಾಗಿ-ಅಂಟಿಲ್ಲದವರಾಗಿ. ೨. ಪರಬೊಮ್ಮ-ಪರಬ್ರಹ್ಮ, ಪರಮಾತ್ಮ.]

## ಹರಿಕೀರ್ತನೆ ಮಾಡೇಳಿರೆಲೆ

**ಖಮಾಚ್** **ಆಟತಾಳ**

ಹರಿಕೀರ್ತನೆ ಮಾಡೇಳಿರೆಲೆ ಜನ ॥ಪ॥

ಹರಿಕೀರ್ತನೆಯೋ ಪರಗತಿಸಾಧನ ।
ತುರಿಹದಿ ಕೈಕೊಂಡೇಳಿ । ರೆಲೆ ಜನ
ಹರಿಯ ಮರೆತು ಸಂ । ಸರಣನಿದ್ರೆಯಲಿ ।
ಗೊರಕೆಯಿಡದೆ ಇನ್ನೇಳಿರೆಲೆ ಜನ ॥೧॥

ಮೂರುಘಳಿಗೆ ಜಗ ತೋರಿ ಹಾರುವದು
ಸಾರವಿಲ್ಲ ಕನಸೇಳಿ । ರೆಲೆ ಜನ ॥೨॥

ಅಚ್ಯುತ ಶಂಕರ । ವುಚ್ಚಪದವಿ ಹರಿ ।
ಮೆಚ್ಚುವ ಕೀರ್ತನೆ ಏಳಿ । ರೆಲೆ ಜನ ॥೩॥

[ತುರಿಹ–ಬೇಗ. ೧. ಅಚ್ಯುತಶಂಕರವುಚ್ಚಪದವಿ-ನಾಶವಿಲ್ಲದ ಸುಖಕರವಾದ ಉನ್ನತವಾದ ಸ್ಥಾನ.]

## ನಾರಾಯಣ ಎನ್ನಿರೊ

**ಆನಂದಭೈರವಿ** **ಆಟತಾಳ**

ನಾರಾಯಣ ಎನ್ನಿರೊ । ನೀವೆಲ್ಲರು ॥ಪ॥

ನಾರಾಯಣ ಎಂಬ ನರನ ಪಾಪಗಳೆಲ್ಲ ।
ಹಾರಿಹೋಗುವವೆಂದು ಶ್ರುತಿ ಸಾರುತಿದೆಯಾಗಿ ॥ಅ॥

ಕರ್ಮ ನಾರಾಯಣನು । ಉಪಾಸನಾ ।
ಮರ್ಮ ನಾರಾಯಣನು ॥
ಕರ್ಮಗಳಿಗೆ ಫಲದಾತ ನಾರಾಯಣ ।
ಕರ್ಮರಹಿತ ನಿತ್ಯಶರ್ಮ ನಾರಾಯಣ ॥

ಚಿತ್ತ ನಾರಾಯಣನು । ಸಾಧಕ ಸಿದ್ಧ ।
ವೇತ್ತ ನಾರಾಯಣನು ॥
ಚಿತ್ತಶುದ್ಧಿಯಲಹ ತಿಳಿವು ನಾರಾಯಣ ।
ಚಿತ್ತಲಯಿಸೆ ಕಂಡತ್ತ ನಾರಾಯಣ ॥೨॥

ಜೀವ ನಾರಾಯಣನು । ಜೀವಾರಾಧ್ಯ ।
ದೇವ ನಾರಾಯಣನು ॥
ಜೀವರೆಲ್ಲರ ಪರಜೀವ ನಾರಾಯಣ ।
ಜೀವಶಂಕರ ಗುರುದೇವ ನಾರಾಯಣ ॥

[ಶ್ರುತಿ-ನಾರಾಯಣೋಪನಿಷತ್ತು. ೧. ಕರ್ಮರಹಿತ-ಕರ್ಮಸಂಬಂಧವಿಲ್ಲದ, ನಿತ್ಯಕರ್ಮ-ನಿತ್ಯಸುಖ. ೨. ವೇತ್ತ-ಜ್ಞಾನಿ, ಚಿತ್ತಲಯಿಸೆ-ಮನಸ್ಸು ಕರಗಿಸಿದರೆ ೩. ಪರಜೀವ-ಇರುವದಕ್ಕೆ ಆಧಾರನಾದ, ಜೀವಶಂಕರ-ಜೀವರಿಗೆ ಒಳ್ಳೆಯದನ್ನು ಮಾಡುವ.]

## ನೆನೆಯೆಲೊ ಪರಶಿವನ

[ಸಾರಸಮುಖಿ]

ಖಮಾಚ್ ಆದಿತಾಳ

ಇನ್ನಾದರೆಯು ನೀ ನೆನೆಯೆಲೊ ಪರಶಿವನ । ಮನವೆ ॥ಪ॥

ಮುನ್ನಿನಂತೆ ನೀ ಬನ್ನಬಡದೆ ।
ಮುನಿ ಮಾನ್ಯಪದವ ಪಡೆ ಧನ್ಯನೆನಿಸು ॥ಅ॥

ನೂರಾರು ಯೋನಿಯು ಸಾರಿ ಭವದೊಳು ।
ಮೀರಿ ನೊಂದೆಯಲಬಹಳ ॥

ಪುರಾರಿನಾಮವು ಪುರಾತ್ತದುರಿತವ । ನುರಿಸಿ
ಬೂದಿಗೈದಿರಿಸುವದಲೆ ॥

ದೇಹಧರ್ಮಕರ್ಮಗಳ । ಮಮತೆಯು ।
ಸಾಹಸದಿಂ ಜವನಿಗಳ ।
ಬಾಹುದವಿದ್ಯಾಮೋಹದಹಂಮಮ ।
ತಾಹರ ನಾ ಹರನೊರ್ವನೆಂದು ॥೨॥

ಶಂಕರಪದದಲ್ಲಿಂಬು । ಭವದೆ । ಭ ।
ಯಂಕರ ತಾಪಕೆ ಕೂರಂಬು
ಸಂಕಟ ಜನಿಮೃತಿಯಂ ಕಾಣದ ಬಲು ।
ಬಿಂಕದ ತಾಣದ ಲೆಂಕನಹೆಯೊ ॥೩॥

[ಬನ್ನಬಡದೆ–ಭಂಗವನ್ನು ಹೊಂದದೆ, ತೊಂದರೆಗೆ ಸಿಕ್ಕದೆ. ೧. ಭವ– ಸಂಸಾರ. ಪುರಾತ್ತದುರಿತ-ಹಿಂದೆ ಸಂಪಾದಿಸಿದ ಪಾಪ. ೨. ಜವನಿಗಳ-ಯಮನಿಂದ ಆಗುವ ಬೇಡಿ. ದೇಹದ ಧರ್ಮಗಳನ್ನೂ ಕರ್ಮಗಳನ್ನೂ ನನ್ನದೆಂದರೆ ಯಮಪಾಶಕ್ಕೆ ಗಂಟುಬೀಳುವೆ. ಅವಿದ್ಯೆಯಿಂದಾಗುವ ನಾನುನನ್ನದೆಂಬುದನ್ನು ಹರನೊಬ್ಬನೇ ನಾಶ ಮಾಡಬಲ್ಲನು. ೩, ಇಂಬು-ಆಶ್ರಯ, ಕೂರಂಬು-ಹರಿತವಾದ ಬಾಣ, ಜನಿ-ಹುಟ್ಟು ವದು. ಬಿಂಕದ–ಹೆಮ್ಮೆಯ, ತಾಣ–ಸ್ಥಾನ, ಲೆಂಕ-ಭಂಟ, ವೀರ. ಪರಮೇಶ್ವರನ ಪಾದವನ್ನು ಶರಣುಹೊಕ್ಕರೆ ಸಂಸಾರದ ತಾಪವೆಲ್ಲವೂ ನಾಶವಾಗುವದು, ಹುಟ್ಟುಸಾವು ಗಳನ್ನು ಕಾಣದ ಉತ್ತಮಗತಿಯನ್ನು ನೀನು ವೀರತನದಿಂದ ಪಡೆದುಕೊಳ್ಳಬಹುದು.]

## ಭವನಾಮಕೀರ್ತನೆ

[ಕರೀರೇ ಕಾಂತನ ಬೇಗ]

**ಕಾನಡ** **ಆಟತಾಳ**

ಭವನಾಮಕೀರ್ತನೆ । ಭವನೌಕೆಯು ॥ಪ॥

ಭವನಾಮಕೀರ್ತನೆ । ಭವಿಗಳಿಗೊದಗೆ ಸಂ ।
ಭವಿಸದು ಪಾಪಾನು । ಭವವಿನ್ನೆಂದೆಂದಿಗು ॥ಅ॥

ವಿಷಯಗಳಾಸೆಯು । ವಿಷವಾಗಿ ದಿನದಿನ ।
ವಿಷಕಂಠನೇ ಮನೋ । ವಿಷಯನಾಗುವ ನಿತ್ಯ ॥೧॥

ಸಾಧುಜನರ ಸಂಗ । ಸಾಧಿಸಿ ಚಿತ್ತಸ ।
ಮಾಧಾನದಿಂ ಶಿವಾ । ರಾಧನೆಗೈಸುವ ॥೨॥

ಮಂಕ ತೆಗೆದುಸರ್ವ । ಸಂಕಟಹರಮಾದ ।
ಶಂಕರಾನಂದದೆ । ತೇಂಕಾಡಿಸುವ ಭವ್ಯ ॥೩॥

ಭವನಾಮ-ಶಿವನಾಮ, ಭವನೌಕೆ-ಸಂಸಾರಸಾಗರವನ್ನು ದಾಟಿಸುವ ಹಡಗು. ಭವಿಗಳಿಗೆ-ಸಂಸಾರಿಗಳಿಗೆ. ೧. ವಿಷಯಗಳಲ್ಲಿ ವೈರಾಗ್ಯವುಂಟಾಗಿ ಈಶ್ವರನೇ ಮನಸ್ಸಿಗೆ ಗೋಚರನಾಗುವನು. ೨. ಸತ್ಸಂಗವನ್ನೂ ಕೊಟ್ಟು, ಚಿತ್ತಕ್ಕೆ ಸಮಾಧಾನವನ್ನೂ ಕೊಟ್ಟು ಶಿವನನ್ನೇ ಧ್ಯಾನಿಸುವಂತೆ ಮಾಡಿಸುತ್ತದೆ. ೩. ಮಂಕ-ತಮಸ್ಸನ್ನು, ತೇಂಕಾಡಿಸುವ–ತೇಲಾಡಿಸುವ, ಭವ್ಯ-ಮಂಗಲಕರವಾದ.]

## ೨೦

**ಖರಹರಪ್ರಿಯ** | **ಆದಿತಾಳ**

ದಾರಿಯು ಬಿಡಿ ನೀವೀಗ । ಇನ್ನು ॥ಪ॥

ದೂರಕ್ಕೆ ಸರಿಯಿರಿ ಬೇಗ ॥ಅ॥

ಆರು ಮಂದಿಯು ಸೇರಿ । ಗಾರುಗೆಡಿಸಿದಿರಿ ।
ಸೇರುವೆ ನಾ । ಪುರವೈರಿಯ ಬೇಗದಿ ॥೧॥

ಸಂಕಲ್ಪಮಾಡುತೆ । ಮಂಕ ನಾನಾದೆನು ।
ಸಂಕಟಹರ ಶ್ರೀವ । ತ್ಸಾಂಕನ ಸೇರುವೆ ॥೨॥

ಕ್ರೋಧಾದಿರೂಪವಿ । ಭೇದವನೊಂದುತೆ ।
ಹಾದಿಯ ಕಟ್ಟಿದಿ । ರೇ ದುರುಳರೆ ಇನ್ನು ॥೩॥

ಇನ್ನು ನೀವೆನ್ನನು । ಬನ್ನಬಡಿಸಲಾರಿರಿ ।
ರೆನ್ನೊಡೆಯನು ಸಿರಿ । ರನ್ನ ಕಾಪಾಡುವ ॥೪॥

ಶರಣೆಂದಿರುವೆ ಶಂ । ಕರನಾಮ ಶ್ರೀಹರಿ ।
ಗರಿಷಡುವರ್ಗಕೆ । ಬರಿದೆ ಬೆದರುವೆನೆ ? ॥೫॥

[೧. ಆರು ಮಂದಿ–ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯ, ಗಾರುಗೆಡಿಸಿದಿರಿ-ಹಾಳುಮಾಡಿದಿರಿ. ೩. ಕ್ರೋಧಾದಿ-ಕ್ರೋಧವೇ ಮುಂತಾದ, ರೂಪವಿಭೇದವ–ರೂಪವಿಶೇಷವನ್ನು. ಒಂದುತೆ-ಹೊಂದುತ್ತ, ಹಾದಿಯು ಕಟ್ಟಿದಿರೇ-ಹಾದಿಗೆ ಅಡ್ಡಲಾದಿರಲ್ಲ ! ೪. ಬನ್ನಬಡಿಸಲಾರಿರಿ-ಭಂಗಪಡಿಸಲಾರಿರಿ, ಸಿರಿರನ್ನ-ಶ್ರೀಪತಿ, ೫. ಶಂಕರನಾಮ ಶ್ರೀಹರಿಗೆ–ಮಂಗಲಕರವಾದ ನಾಮವುಳ್ಳ ಶ್ರೀವಿಷ್ಣುವಿಗೆ, ಅರಿಷಡುವರ್ಗ-ಕಾಮಕ್ರೋಧಾದಿಗಳು.]

## ನಾಮಸಂಕೀರ್ತನೆ

**ದರ್ಬಾರು,** **ಆದಿತಾಳ**

ನಾಮಸಂಕೀರ್ತನೆ । ನಮಗಿರಲೇಗಳೂ ॥ಪ॥
ಮಾಮನೋಹಾರಿ ಶ್ರೀ । ಶೌರಿನಾರಾಯಣನ ॥ಅ॥

ಬೆಳಗಿನ ಜಾವದೊ । ಳಳಿಯಲು ನಿದ್ರೆಯು ।
ಬೆಳಕುಗಳೆಲ್ಲಕೂ । ಬೆಳಕಹ ದೇವನ ॥೧॥

ಸ್ನಾನಸಂಧ್ಯಾಜಪ । ಧ್ಯಾನದ ಕಾಲದೆ ।
ಮೌನಿಹೃನ್ಮಂದಿರ । ಜ್ಞಾನದೀಪಾಯಿತನ ॥೨॥

ನಡುಹಗಲಾಗಲು । ಪಡೆದುದ ಭುಂಜಿಸಿ ।
ಅಡಿಗಡಿಗಾ ಜಗ । ದೊಡೆಯ ಗೋವಿಂದನ ॥೩॥

ಜೀವನಯಾತ್ರೆಗೆಂ । ದೇ ವ್ಯವಹಾರವ ।
ನಾವೆಸಗುತ್ತಿರೆ । ಕಾವ ಕರುಣಾಳುವ ॥೪॥

ಕನಸಿಲಿ ಕಂಡುದ । ನೆನೆಸುತ್ತೆ ನಾವಿರೆ ।
ಅನಘತತ್ತ್ವಾರ್ಥವ । ನನುಗೊಳಿಪ ಶಂಕರ

[ಮಾಮನೋಹಾರಿ-ಲಕ್ಷ್ಮಿಯ ಮನಸ್ಸನ್ನು ಸೆಳೆಯುವ ವಿಷ್ಣು. ೧. ಅಳಿಯಲು_ನಾಶವಾಗಲು, ಬೆಳಕುಗಳೆಲ್ಲಕೂ ಬೆಳಕು-ಬೆಳಕೆಲ್ಲವನ್ನೂ ಬೆಳಗುವ ಚೈತನ್ಯ. ೨. ಮೌನಿಗಳ ಹೃದಯವೆಂಬ ಮನೆಯಲ್ಲಿ ಬೆಳಗುವ ಜ್ಞಾನದೀಪನು. ೩. ಕನಸಿನಂತಿರುವ ಈ ವ್ಯವಹಾರದಲ್ಲಿ ಕಂಡ ವಿಷಯಗಳನ್ನೇ ನಾವು ಸ್ಮರಿಸುತ್ತಿರುವಲ್ಲಿ ಶ್ರೇಷ್ಠವಾದ ತತ್ತ್ವಾರ್ಥವನ್ನು ಅನುಗ್ರಹಿಸುವ. ]

## ರಾಮಕೃಷ್ಣ

**ಬಿಲಹರಿ** **ಏಕತಾಳ**

ರಾಮಕೃಷ್ಣ ಗೋವಿಂದ । ರಕ್ಷಿಸೆಮ್ಮ ನಿತ್ಯಾನಂದ ॥ಪ॥

ರಾಮಕೃಷ್ಣ ಗೋವಿಂದ । ರಾಗವಿದೂರ ಪರಮಾನಂದ ॥ಅ॥

ಪತ್ತವತಾರವೆತ್ತಿದುದಾರ । ಸತ್ಯಧರ್ಮಗಳ ಸಲಹಿದ ಧೀರ ।
ಉತ್ತಮಗುಣಕರ್ಮಗಳನು ಪೂರ । ಬಿತ್ತರಿಸುವ ಲೀಲೆಗಳಾಧಾರ ॥೧॥

ಆದಿಗಾದ್ಯ ವೇದವೇದ್ಯ । ವೇದಾಂತೋದಿತಲಕ್ಷಣ ಹೃದ್ಯ ।
ವಾದಿತಾರ್ಕಿಕವ್ರಾತಕಭೇದ್ಯ । ಬಾಧಿತಸಂಸೃತಿಮೂಲಾವಿದ್ಯ ॥೨॥

ನಾಮರೂಪಕರ್ಮವಿಲಾಪ । ಕಾಮಿತದಾಯಕ ಕರುಣಾರೂಪ ।
ಶಾಮಿತಶರಣಾವಳಿಹೃತ್ತಾಪ । ತಾಮಸಹರ ಶಂಕರಚಿದ್ದೀಪ ॥೩॥

[೧. ಬಿತ್ತರಿಸುವ_ವಿಸ್ತರಿಸಿ ತೋರಿಸುವ. ೨. ಆದಿಗಾದ್ಯ-ಕಾರಣಕ್ಕೂ ಕಾರಣನಾಗಿರುವ, ಪರಮಕಾರಣನಾದ ; ವೇದಾಂತೋದಿತಲಕ್ಷಣ-ಉಪನಿಷತ್ತಿನಲ್ಲಿ ಹೇಳುವ ಲಕ್ಷಣವುಳ್ಳವ, ಹೃದ್ಯ-ಮನೋಹರನಾದ. ವಾದಿತಾರ್ಕಿಕವ್ರಾತಕೆ ಅಭೇದ್ಯ—ತರ್ಕಪ್ರಧಾನವಾದ ವಾದಿಗಳಿಗೆ ಒಳಹೊಕ್ಕು ಗ್ರಹಿಸುವುದಕ್ಕೆ ಆಗದವನು, ಬಾಧಿತಸಂಸೃತಿಮೂಲಾವಿದ್ಯ-ಸಂಸಾರಕ್ಕೆ ಕಾರಣವಾಗಿರುವ ಅವಿದ್ಯೆಯನ್ನು ಕಳೆಯುವಾತನು. ೩. ನಾಮರೂಪಕರ್ಮಗಳನ್ನು ಕರಗಿಸಿ, ಇಷ್ಟಾರ್ಥವನ್ನು ಕೊಡುವ ಕರುಣಾರೂಪನು ನೀನು. ಶರಣರ ಹೃದಯದ ಸಂತಾಪವನ್ನು ನಾಶಪಡಿಸುವಾತನು, ಅಜ್ಞಾನದ ಕತ್ತಲೆಯನ್ನು ನಾಶಪಡಿಸುವ ಮಂಗಲಕರವಾದ ಜ್ಞಾನದೀಪನು.]

## ನಿನ್ನ ನಂಬಿದೆ

**ಮಾಯಾಮಾಳವಗೌಳ** **ರೂಪಕತಾಳ**

ನಿನ್ನ ನಂಬಿದೆ । ನಿಗಮವಿನುತ ॥ಪ॥

ಸನ್ನತಪತಿತಾವನ । ನುನ್ನದೋಷ ಗುಣಗಣ ಶಿವ ॥ಅ॥

ಪಂಚಬ್ರಹ್ಮಖ್ಯಾಪಿತ । ಪಂಚಾನನಸುವಿಭೂಷಿತ ।
ಪಂಚಾಕ್ಷರಮಂತ್ರಗೀತ । ಪಂಚಭೂತಾತೀತ ॥೧॥

ಜಗದ ಜನ್ಮದಲ್ಲಿ ಭವನು । ಜಗವ ಪಾಲಿಪಲ್ಲಿ ಮೃಡನು ।
ಜಗದ ಲಯದೆ ಹರನೆನಿಸುವ । ತ್ರಿಗುಣರಹಿತ ಶಿವನೆ ದೇವ ॥೨॥

ವಿಷಯಭೋಗದಲ್ಲಿ ಜೀವ । ವಿಷಯತ್ಯಾಗದಲ್ಲಿ ದೇವ ।
ವಿಷವಿಭೂಷಕಂಠ ಶಂಕರ । ಸುಷಮಾಸ್ತಮೋಹದೋಷ ॥೩॥

[ನಿಗಮವಿನುತ–ಶ್ರುತಿಗಳಿಂದ ಹೊಗಳಲ್ಪಟ್ಟವ, ಸನ್ನತಪತಿತಾವನ-ನಮಸ್ಕರಿಸಿದ ಪತಿತರನ್ನು ಕಾಪಾಡುವವ, ನುನ್ನದೋಷ–ಹೋಗಲಾಡಿಸಲ್ಪಟ್ಟ ದೋಷವುಳ್ಳ ನಿರ್ದೋಷ. ೧. ಪಂಚಬ್ರಹ್ಮಖ್ಯಾಪಿತ–ಸದ್ಯೋಜಾತಾದಿಮಂತ್ರಗಳಿಂದ ಪ್ರಾಕಾಶಿತವಾಗುವ, ಷಣ್ಣಾಕ್ಷರಮಂತ್ರಗೀತ-ಶಿವಪಂಚಾಕ್ಷರೀಮಂತ್ರದಿಂದ ತಿಳಿಸಲ್ಪಡುವವ. ೩. ಶಂಕರಸುಷಮಾಸ್ತಮೋಹದೋಷ-ಮಂಗಲಕರವಾದ ತೇಜಸ್ಸಿನಿಂದ, ಅಜ್ಞಾನವೆಂಬ ಕತ್ತಲೆಯನ್ನು ಪಾರಗೊಳಿಸುವವನು.]

## ಬೇಡುವೆ ದೇವ

**ಖರಹರಪ್ರಿಯ,** **ಆದಿತಾಳ**

ಬೇಡುವೆ ದೇವ । ಜೋಡಿಸಿ ಕರವ ॥ಪ॥

ನೀಡೆನಗೀ ಮೂರಸೂ । ಕೂಡಿಹ ವರವ ॥ಅ॥

ಬಾಲರು ಗೆಳೆಯರ । ಮೇಳದೆ ಸುಖಿಸುವ ।
ಪೋಲುವೆಯಿಂ ನಿನ್ನೊಳೇ । ಕೀಲಿಸಿದ ನಡೆಯ ॥೧॥

ಮರುಳರು ಬರಿದೇ । ಜರುಚುವ ಪರಿಯಲಿ ।
ನಿರುತವು ನಿನ್ನನೇ । ಸ್ಮರಿಸುವ ನುಡಿಯ ॥೨॥

ಮುದುಪರು ಚಿಂತೆಗ । ಳೊದವಿನೊಳ್-ಸಿಲ್ಕಿಪ ।
ವಿಧದೆ ಶಂಕರನೊಳೀ । ಹುದುಗಿಪ ಬಗೆಯು ॥೩॥

[೧. ಮೇಳದೆ-ಜತೆಯಲ್ಲಿ, ಕೀಲಿಸಿದ-ಬಿಡದೆ ಸಂಬಂಧಿಸಿರುವ. ೨. ಜರುಚುವ-ಹರಟುವ, ನಿರುತವು-ಯಾವಾಗಲೂ. ೩. ಮುದುಪರು-ಮುದುಕರು, ಒದವು-ಪ್ರಾಪ್ತಿ, ಸಿಲ್ಕಿಪ—ಸಿಕ್ಕಿಕೊಂಡಿರುವ. ಯಾವ ಯೋಚನೆಯೂ ಇಲ್ಲದ ಹುಡುಗರು ಆಡುತ್ತಿರುವಂತೆ ನಿನ್ನನ್ನೇ ಲಕ್ಷ್ಯದಲ್ಲಿಟ್ಟು ನಡೆಯುತ್ತಿರುವದನ್ನೂ, ಹುಚ್ಚರು ಕಾರಣವಿಲ್ಲದೆ ಹರಟುತ್ತಿರುವಂತೆ ನಿನ್ನನ್ನು ಸ್ಮರಿಸುತ್ತಿರುವಂತೆ ಮಾಡುವ ನಾಮಸ್ಮರಣೆಯನ್ನೂ, ಮುದುಕರು ಯಾವದೋ ವಿಷಯವನ್ನು ಚಿಂತಿಸುತ್ತಾ ತೊಳಲುತ್ತಿರುವಂತೆ ನಿನ್ನನ್ನೇ ಧ್ಯಾನಿಸುವ ಮನಸ್ಸನ್ನು ಕೊಡು-ಎಂದು ಪ್ರಾರ್ಥಿಸಿದೆ.]

## ದಯಮಾಡೋ ದೇವ

ಭೈರವಿ ಆದಿತಾಳ

ದಯಮಾಡೋ ದೇವ ನಿ । ನ್ನಯ ಪ್ರೇಮಸಾರವ ॥ಪ॥

ಭಯಶೂನ್ಯವಾದ ನಿ । ರ್ದ್ವಯತಾವಿಚಾರವ ॥ಅ॥

ಎಚ್ಚರದಲ್ಲಿ ಕಾಂಬುವ । ದಚ್ಚರಿಯೆಂದೆಂಬುವ ।
ಹುಚ್ಚ ಬಿಡಿಸಿಕೊಂಬುವ । ಹೆಚ್ಚಿನರಿವನೇ ಭವ ॥೧॥

ಕನಸೆಂದಿದೆಲ್ಲವ । ನೆನಸುತ್ತೆ ನಲ್ಲುವ ।
ಬಿನದದೆ ನಿಲ್ಲುವ । ಮನಸೊಂದನೇ ಭವ ॥೨॥

ಬರುನಿದ್ರೆಯೊಂದುವ । ನರನಿಪ್ಪ ಚಂದವ ।
ಪರಿಹಿಲ್ಲದ್ದೈದಿ ಶಂ । ಕರನಾಗುವಂದವ ॥೩॥

[ನಿರ್ದ್ವಯತಾವಿಚಾರ-ಪರಮಾತ್ಮನಿಗೆ ಎರಡನೆಯದು ಯಾವದೂ ಇಲ್ಲವೆಂಬ ವಿಚಾರ. ೧. ಎಚ್ಚರದವಸ್ಥೆಯಲ್ಲಿ ಕಾಣುವದನ್ನೇ ಆಶ್ಚರ್ಯವೆಂದು ಕಾಣುತ್ತಿರುವ ತಪ್ಪುತಿಳಿವಳಿಕೆಯನ್ನು ಮೀರುವ ಉತ್ತಮಜ್ಞಾನವನ್ನು ಕೊಡು. ೨. ಇದೆಲ್ಲವೂ ಕನಸೆಂದು ವಿನೋದದಿಂದ ಕಾಣುತ್ತಿರುವ ಮನಸ್ಸನ್ನು ಕೊಡು. ೩. ತನಿನಿದ್ರೆಯಲ್ಲಿ ಜನರಿರುವಂತೆ ; ಅಜ್ಞಾನರಹಿತನಾಗಿ ಶಂಕರನಾದ ನಿನ್ನಲ್ಲಿ ಐಕ್ಯವಾಗುವ ಬಗೆಯನ್ನು ಅನುಗ್ರಹಿಸು.]

# ಇದು ಉಪಕಾರವೋ

**ಕಲ್ಯಾಣಿ** **ಆದಿತಾಳ**

ಇದು ಉಪಕಾರವೋ ಅಪಕಾರವೋ ॥ಪ॥

ಸದಯನೊ ನಿರ್ದಯನೋ ನೀ, ನೀ ಮಾಡಿರುವ । ದಿದು ॥ಅ॥

ಕರಣವೀರೈದು ನಿನ್ನುರುತರ ಸೇವೆಯ ।
ನರಿದೆಸಗುವ ಪರಿ ಗುರು ಶಾಸ್ತ್ರನಾವೆಯ ॥
ಭರದ ಸಂಸೃತಿಯು ಶರಧಿಯೊಳಿರಿಸುತೆ ।
ಮರಹಿನ ದುರಿತಮಕರಗಳ ತುರುಗಿ ಕೊರಗಿಪು । ದಿದು ॥೧॥

ಎನ್ನೊಳಹೊಕ್ಕೆದೆಯನ್ನೆ ಮನೆಮಾಡುತೆ ।
ಕಣ್ಣಕಣ್ಣಹ ಚೈತನ್ಯದಿಂ ನೋಡುತೆ ॥
ಎಣ್ಣಲುಸುರಲಿಕೆ ತಿಣ್ಣ ಮಾದ ಬಲು ।
ಸಣ್ಣರೂಪಿನಿಂ ಕಣ್ಮನ ಮೀರಿರುತಿರುವ । ದಿದು ॥೨॥

ಮಾನಾದಿಸಾಹ್ಯಮನೇನುವನೊಂದದೆ ।
ನೀನು ಸರ್ವಾತ್ಮನೆಂದೇ ನಂಬುವಂದದೆ ॥
ನಾನೆ ಬ್ರಹ್ಮವೆಂಬೀ ನುಡಿ ಕೇಳಿಸಿ ।
ಮೌನಿ ಶಂಕರನು ನೀನೆಂದೆನಿಸಿ ನಿರುಕಿಪು । ದಿದು ॥೩॥

[೧. ಹತ್ತು ಇಂದ್ರಿಯಗಳೂ ನಿನ್ನ ಹೆಚ್ಚಿನ ಸೇವೆಯನ್ನೇ ಮಾಡುವಂತೆ, ಗುರುಗಳು, ಶಾಸ್ತ್ರ—ಎಂಬ ನಾವೆಯನ್ನು ಈ ಸಂಸಾರಸಾಗರದಲ್ಲಿಟ್ಟಿದ್ದೀಯೆ ; ಅಜ್ಞಾನಗಳೆಂಬ ಪಾಪದ ಮೊಸಳೆಗಳನ್ನು ಇಲ್ಲಿಟ್ಟಿದ್ದೀಯಲ್ಲ ! ೨. ನನ್ನ ಹೃದಯದೊಳಗೇ ಇದ್ದುಕೊಂಡು, ಇಂದ್ರಿಯಗಳನ್ನೆಲ್ಲ ಬೆಳಗುತ್ತಾ ಇದ್ದೀಯೆ. ಆದರೆ ಮನಸ್ಸಿನಿಂದ ತಿಳಿಯುವದಕ್ಕೂ ಮಾತಿನಿಂದ ಹೇಳುವದಕ್ಕೂ ಆಗದಂಥ ಸೂಕ್ಷ್ಮರೂಪಿನಿಂದ ಇದ್ದೀಯಲ್ಲ ! ೩. ಪ್ರಮಾಣವೇ ಮುಂತಾದ ಸಹಾಯವನ್ನೇನೂ ಆಶ್ರಯಿಸದೆ, ನೀನು ಸರ್ವಾತ್ಮನೇ ಎಂದು ನಂಬುವಹಾಗೆ ತತ್ತ್ವಮಸಿ ಎಂಬ ವಾಕ್ಯವನ್ನು ಶ್ರುತಿಯಲ್ಲಿ ಹೇಳಿದ್ದೀಯೆ ; ಆದರೂ ನೀನು ಎಲ್ಲವನ್ನೂ ನೋಡುತ್ತ ಒಳಗೇ ಸುಮ್ಮನೆ ಇರುತ್ತಿರುವೆಯಲ್ಲ !]

## ಶ್ರೀಪತಿಯೊಲವು

**ಮಧ್ಯಮಾವತಿ** **ಆದಿತಾಳ**

ಶ್ರೀಪತಿಯೊಲವೊಂ । ದೇ ಪರಿಯಾಗಿರಲಿ ॥ಪ॥

ಆ ಪರಾತ್ಪರನಾ । ದಾ ಪುರುಷೋತ್ತಮ ॥ಅ॥

ಭ್ರಾಂತಿಯ ಜಗದಿಂ । ದಂತರಂಗವು ಕುಣಿ
ವಂತಿರದಾ ಮಹಾ । ಶಾಂತಿದಾಂತಿಗಳೀವ ॥೧॥

ಪರಿಪರಿ ತೋರುವೆ । ಚ್ಚರುಕನಸೆನ್ನುವ ।
ಮರುಜಲತೃಷ್ಣೆಯು । ನಿರದಂತೆ ಕರುಣಿಪ ॥೨॥

ಸುಪ್ತಿಸಮಾಧಿಯೊಳ್ । ಕ್ಲಿಪ್ತಮಾಗಿ ಸ್ವಯಂ ।
ದೀಪ್ತಿಯಿಂ ರಾಜಿಸು । ತಾಪ್ತಶಂಕರನಹ

[೧. ಮಾಯಾರೂಪವಾದ ಜಗತ್ತಿನಿಂದ ಮನಸ್ಸನ್ನು ಕುಣಿದಾಡದಂತೆ, ಶಾಂತಿ ದಾಂತಿಗಳನ್ನು ಕೊಡುವ ಪರಮಾತ್ಮನ ಅನುಗ್ರಹವು ಒಂದೇ ರೀತಿಯಲ್ಲಿರಲಿ. ೨. ಎಚ್ಚರಕನಸು-ಎಂಬಿವು ಬಿಸಿಲುಕುದುರೆಯ ನೀರಿನಂತೆ ಇರುವವು ; ಅವುಗಳಲ್ಲಿ ಆಸೆಯಿಲ್ಲದಂತೆ ಕರುಣಿಸುವ ಅನುಗ್ರಹವಿರಲಿ ! ೩. ಗಾಢನಿದ್ರೆ, ಸಮಾಧಿ– ಇವೆರಡರಲ್ಲಿಯೂ ಸ್ವಯಂಪ್ರಕಾಶನಾಗುತ್ತಾ, ಸರ್ವರಿಗೂ ಆಪ್ತನಾಗಿರುವ ಮಂಗ ಲಾತ್ಮನ ಅನುಗ್ರಹವಿರಲಿ !]

## ತುರುಕರುಗಳ

**ಪಂತವರಾಳಿ**

ತುರುಕರುಗಳ ಪಾರ್ವರುಗಳ ಪೊರೆವನು ।
ತುರುಕರ ದೇವನೆ ಅಲ್ಲ ॥ಪ॥

ತುರುಕರು ತಿರುಕರು ಸರುವರು ನಂಬಿಹ ।
ಮರಿಯೇಶನೆ ತಾ ಮೊದಲಲ್ಲ ॥ ॥ಅ॥

ನಾಮರೂಪಗಳ ತಾ ಮೀರಿರುವನು ।
ರಾಮಭೂಪನೇ ಅಲ್ಲ ।
ನೇಮನಿಷ್ಠೆಗಳನೇ ಮನದರ । ದಿಹ ।
ಜೈಮಿನಿಯೊಡೆಯನೆ ಮೊದಲಲ್ಲ ॥
ಕಾಮಿನಿ ಕಾಂಚನಕಂಡರಿಯನು ಬಲ ।
ರಾಮನನುಜನೇ ಅಲ್ಲ ।
ಭೂಮಿಯು ಮೊದಲೆಣ್ಬರಿಜ ತಾಳದವ
ಸೋಮಶೇಖರನೆ ಮೊದಲಲ್ಲ ॥೧॥

ವೇದನಾಲ್ಕ ಮುನ್ನೋದದರಿವ ಕಮ ।
ಲೋದರಜಾತನೆ ಅಲ್ಲ ।
ಆದಿಯಂತವಿರದಾದಿಮೂರ್ತಿ ಜಗ ।
ಕಾದ ವಿಷ್ಣು ತಾ ಮೊದಲಲ್ಲ ॥
ಆದಿತೇಯ ದೈತೇಯರಾತ್ಮ
ಮಾದೇವನರಸಿ ದೇವಿಯೆ ಅಲ್ಲ ।
ಮೇದಿನಿಗೆಲ್ಲ ಸುಮೋದ ಕಾರಣನು ।
ಮೋದಕಾರ್ಥಿಯೇ ಮೊದಲಲ್ಲ ॥೨॥

ವ್ಯಂಜಕವೃತ್ತಿಯ ಸೋಂಕದಿರ್ಪ ಪಾ ।
ತಂಜಲರೀಶ್ವರನೇ ಅಲ್ಲ ।
ಸಂಜ್ವರಮೂರರರಿಯದನವ ಸಾಂಖ್ಯ ನಿ ।
ರಂಜನಪ್ರುರುಷ ಮೊದಲಲ್ಲ ॥
ಮೂಜಗವನು ಮೋಳೆಯಿಸಿದ ಮಾಯಿಯಣು ।
ಪುಂಜವ ಬಯಸುವನೇ ಅಲ್ಲ ।
ಅಂಜಿಕೆ ಮುಪ್ಪು ಮರಣ ಮುಂತಾದುವ
ಭುಂಜಿಪ ಶಂಕರ ಬೇರಲ್ಲ ॥೩॥

[ತುರುಕರುಗಳ–ಹಸುಕರುಗಳನ್ನು, ಪಾರ್ವರುಗಳ-ಬ್ರಾಹ್ಮಣರನ್ನು ಮರಿಯೇಶ–ಮೇರಿಯ ಮಗನಾದ ಜೀಸಸ್ ಕ್ರೈಸ್ತನೆ ? ೧. ಮನದರದೆ ಇಹ–ಮನಸ್ಸಿಗೆ ಹತ್ತಿಸಿಕೊಳ್ಳದೆ ಭಕ್ತಿಯೊಂದನ್ನೇ ಲೆಕ್ಕಕ್ಕೆ ತರುವ, ಜೈಮಿನಿಯೊಡೆಯನೆ–ಪೂರ್ವ ಮೀಮಾಂಸಕರು ಹೇಳುವ ದೇವನೆ ? (ಕೆಲವರು ಪೂರ್ವಮೀಮಾಂಸಕರೂ ಈಶ್ವರನನ್ನು ಒಪ್ಪಿರುತ್ತಾರಾದ್ದರಿಂದ ಹೀಗೆಂದಿದೆ.) ಬಲರಾಮನನುಜ (ಕೃಷ್ಣನು ಗೋಪಿಯರೇ ಮುಂತಾದ ಸ್ತ್ರೀಯರೊಡನೆ ಆಡಿದವನು ಎಂಬುದನ್ನಿಟ್ಟು ಹೀಗೆಂದಿದೆ.) ಭೂಮಿಯು ಮೊದಲೆಣ್ಬರಿಜ–ಪೃಥ್ವಿಯೇ ಮುಂತಾದ ಎಂಟು ಮೂರ್ತಿಗಳುಳ್ಳವ. ೨. ಪರಮಾತ್ಮನಿಂದಲೇ ವೇದಗಳು ಬ್ರಹ್ಮನಿಗೆ ದೊರಕುತ್ತವೆ ; ಆದ್ದರಿಂದ ಈತನು ಬ್ರಹ್ಮನಲ್ಲ ; ಜಗಕಾದ-ಜಗತ್ತಿನ ಸ್ಥಿತಿಗೆ ತಕ್ಕ ; ಮಾದೇವನರಸಿ ದೇವಿ–ದೇವಿಯು ರಕ್ಕಸರನ್ನೆಲ್ಲ ಕೊಂದವಳು, ಸುಮೋದಕಾರಣನು–ಆನಂದಕ್ಕೆ ಕಾರಣನಾದವನು. ಮೋದಕಾರ್ಥಿ-ಗಣಪತಿ ; ೩. ಪಾತಂಜಲರೀಶ್ವರ-ಯೋಗಿಗಳು ಹೇಳುವ ಈಶ್ವರನು ಕ್ಲೇಶಾದಿದೋಷಗಳಿಲ್ಲದ ಪುರುಷವಿಶೇಷನಾದ್ದರಿಂದ ಅನುಮಾನಕ್ಕೂ ವಾಕ್ಯಕ್ಕೂ ವಿಷಯನು ; ಈ ಪರಮಾತ್ಮನು ವಾಚ್ಯವೃತ್ತಿಯಿಂದಲಾಗಲಿ, ಲಕ್ಷಣಾವೃತ್ತಿಯಿಂದಲಾಗಲಿ, ವ್ಯಂಜನಾವೃತ್ತಿಯಿಂದಲಾಗಲಿ ಶಬ್ದವು ವಿಷಯೀಕರಿಸಲಾಗದೆ ಇರುವವನು. ವೈಶೇಷಿಕರ ಈಶ್ವರನು ಪರಮಾಣುಗಳನ್ನು ಉಪಾದಾನವಾಗಿ ಬಯಸಬಹುದು ; ಆದರೆ ಈತನು ಮಾಯಾಮಾತ್ರದಿಂದ ಜಗತ್ತನ್ನು ಸೃಷ್ಟಿಸುತ್ತಾನೆ.

ಭಯಜರಾಮರಣರೂಪವಾದ ಸಂಸಾರವು ನಿತ್ಯಶುದ್ಧಬುದ್ಧಮುಕ್ತನಾದ ಶಂಕರ ಪರಮಾತ್ಮನೇ ನಾನೆಂಬ ಜ್ಞಾನದಿಂದ ಹೋಗುತ್ತದೆ, ಸಗುಣಮೂರ್ತಿಗಳ ಉಪಾಸನೆಯು ಇದಕ್ಕೆ ಸಹಾಯಕವಾಗಬಹುದು, ಅಷ್ಟೆ. ಯಾವ ದರ್ಶನಗಳು ಯಾವದೇವರನ್ನು ಹೇಳಿದರೂ ಶುದ್ಧಪರಮಾತ್ಮನನ್ನು ಇದ್ದದ್ದು ಇದ್ದಂತೆ ತಿಳಿಸಿಲ್ಲ–ಎಂಬುದು ಒಟ್ಟರ್ಥ]

## ಅರಿತು ಪ್ರಾಜ್ಞನಾಗು

**ಪಂತವರಾಳಿ** **ಏಕತಾಳ**

ಗೆದ್ದೆಗೆದ್ದೆನೆಂದು ಮೊದ್ದು ಬುದ್ಧಿಯಿಂದ ಒಗ್ಗುತ್ತಿರುವ
ಬುದ್ಧಿಹೀನ ಮನುಜ ಗಳಹದಿದ್ದು ಕೇಳೆಲೆ ॥ಪ॥

ಕಣ್ಣು ಕಿವಿಯು ಮೂಗು ಬಾಯಿಯನ್ನು ಮಿಕ್ಕ ಕರಣಗಳನು
ಕುನ್ನಿ ನಿನ್ನವೆಂದು ನಂಬಿ ಬನ್ನಬಡುವೆಯ ?
ನಿನ್ನದೆಂಬ ಮನವ ಬುದ್ಧಿಯನ್ನು ಪ್ರೇರಿಸುತ್ತ ನಿತ್ಯ
ನಿನ್ನತನವ ನಿನಗೆ ಕೊಟ್ಟರಾರು ಬಲ್ಲೆಯ ? ॥೧॥

ಪಂಚಭೂತಗಳಿಗೆ ಮರುಳೆ ಸಂಚಕಾರವಿತ್ತೆಯೇನು ?
ಪಂಚಮುಖನ ದಯವಿದೆ ನಡೆ ಮಿಂಚಿ ಮರೆವೆಯು
ಮಂಚ_ಮಡದಿ ಮಕ್ಕಳಿಂದು ಚಂಚಲವನೆ ನಂಬಿ ಆತ್ಮ
ವಂಚನೆಯಲಿ ಸಂಕಟಗಳ ಸಂಚಿಗೊಲಿವೆಯು ? ॥೨॥

ಅಗ್ನಿವಾಯು ಶಕ್ರರಂದು ಭಗ್ನಬಲರದಾಗಿ ಶಿವನ
ನುಗ್ರಹಕ್ಕೆ ಸಂದು ಭಕ್ತಿ ಮಗ್ನರಾಗರೆ ?
ಯಜ್ಞಹರನೆ ಸರ್ವಶಕ್ತ ವಿಘ್ನಶಂಕರಾತ್ಮನರಿತು
ಪ್ರಾಜ್ಞನಾಗು ಪರವ ನಿರ್ವಿಘ್ನ ಪಡೆವರೆ ॥೩॥

## ಜ್ಞಾನವೆಂಬುದು ಬರಿಯಮಾತಲ್ಲ

**ಮಾಯಾಮಾಳವಗೌಳ**

ಜ್ಞಾನವೆಂಬುದು ಬರಿಯಮಾತಲ್ಲ । ಕೇಳಿರೀ ಸೊಲ್ಲ
ಜ್ಞಾನವಂತನಾಗಲಿಕೆ ಶ್ವಾನಬುದ್ಧಿಹೋಗಬೇಕು. ।
ಧ್ಯಾನಮೌನಯೋಗದಿಂದ ತಾನು ತಾನೇ ಆಗಬೇಕು. ॥ಪ॥

ಹರಿಯನಾಮವ ನುಡಿಯುತಿರಬೇಕು । ತಾ ಮಾಡಿದಂಥ ।
ದುರಿತವೆಲ್ಲವ ತೊಡೆಯುತಿರಬೇಕು ।
ಕರಣ ಮೂರರ ಕರ್ಮವೆಲ್ಲವ ಹರಿಯಪೂಜೆಯ ಮಾಡಿ ಬಂಧವ ।
ಹರಿಯುವದಕಧ್ಯಾತ್ಮಯೋಗದ ಹರಿಬದಲ್ಲೇ ದುಡಿಯಬೇಕು ॥೧॥

ಮಾತನೆಲ್ಲ ಬಿಟ್ಟು ಬಿಡಬೇಕು । ಈ ದೇಹದೊಳಗಿನ ।
ತೂತನೆಲ್ಲವ ಮುಚ್ಚಿಬಿಡಬೇಕು ।
ಓತು ಶಾಸ್ತ್ರಾಚಾರ್ಯಬೋಧೆಗೆ ಹಾತುವರಿಯುತ ಕಿವಿಯನಿತ್ತು ।
ದ್ವೈತಚಿಂತೆಯ ಮನದೊಳಿಟ್ಟು ಭೀತಿಯೆಲ್ಲವ ಬಿಡಲುಬೇಕು ॥೨॥

ವಾಕ್ಕು ಮನದಲಿ ಕರ ಬಿಡಬೇಕು । ಆ ಮನವು ಬುದ್ಧಿಯ
ಲೇಕವಾಗಿಯೆ ಬೆರೆತು ಬಿಡಬೇಕು ॥

ಸೋಕಿ ತನ್ನೊಳಗೆರಕವಾಗಲುಬೇಕು ಬುದ್ಧಿಯು ತಾನು ತನ್ನ ವಿ ।
ವೇಕದಲಿ ಸಚ್ಚಿತ್ಸುಖಾತ್ಮನ ತಾಕಿ ಶಂಕರನಾಗಬೇಕು ॥೩॥

# ದಿವ್ಯೌಷಧ

**ಕಾನಡ** **ಆಟತಾಳ**

ಔಷಧವನು ಸೇವನೆ ಮಾಡಿರೊ । ಪೀ
ಯೂಷಕಿರಣಶೇಖರ ನಾಮವೆಂಬ ದಿವ್ಯೌಷಧವನು ॥ಪ॥

ಕರ್ಮದ ಫಲವ ಭೋಗಿಸದೆ ಪಥ್ಯದೊಳಿದ್ದು ।
ನಿರ್ಮಮತೆಯನೆ ಸಂತತವು ಮೆದ್ದು ॥
ಮರ್ಮವರಿತು ಸಾಧು ಸಂಗದಿ ಬೆರೆಸುತ ।
ಶರ್ಮದಾಯಕ ಶರ್ವನಾಮವೆಂಬ ದಿವ್ಯೌಷಧವನು ॥೧॥

ಶೀತೋಷ್ಣಗಳ ಮಾರಿ ಸಮತೆಯನೊಳಕೊಂಡು ।
ಕಾತರಿಸದೆ ಶಮದಮವನುಂಡು ॥
ಓತು ಕಷಾಯವನೆಲ್ಲ ಪಾಕವ ಮಾಡಿ ।
ವಾತಾಶನಭೂಷಣನಾಮವೆಂಬ ದಿವ್ಯೌಷಧವನು ॥೨॥

ರಾಗದ್ವೇಷಗಳೆಂಬ ಧಾತುಗಳನು ಸುಟ್ಟು ।
ತ್ಯಾಗವೆಂದೆಂಬ ಭಸ್ಮವ ಕೂಡಿಟ್ಟು ॥
ನೀಗಿ ದುಃಖವನೆಲ್ಲ ಗರಪುರಪತಿ ಭವ ।
ರೋಗವೈದ್ಯ ಶ್ರೀಕಂಠೇಶನಾಮ ದಿವ್ಯೌಷಧವನು ॥೩॥

# ನೀನೆ ನಿನ್ನೊಳಪೊಕ್ಕು ನೋಡು

**ಮಲಯ ಮಾರುತ** **ಛಾಪು**

ನೀನೆ ನಿನ್ನೊಳಪೊಕ್ಕು ನೋಡು । ಸು
ಜ್ಞಾನದ ಸುಧೆಯ ಸಾಗರದಲೋಲಾಡು ॥ಪ॥

ಹೊರಗಿನ ವಿಷಯವ ದೂಡು । ನಿನ್ನ
ಶರೀರ ಕರಣಗಳ ಹರಿದು ಬಿಸಾಡು ॥
ಅರಿವ ಮನವ ಬಗೆ ಮಾಡು । ಒಳ
ಸರಿದು ಮತ್ತೆಲ್ಲವ ನಿರುಕಿಸಿ ನೋಡು ॥೧॥

ಎಚ್ಚರ ಕನಸೆಂಬ ಗೂಡು । ನಿನ್ನ
ಹುಚ್ಚಿರುವ ತನಕವಹುದು ನೆಲವೀಡು ।
ಮುಚ್ಚುವ ಮಡಕೆಯಾಡಾಡು । ನಿತ್ಯ
ದೆಚ್ಚರದಲಿ ನಿಂತು ನಲಿನಲಿದಾಡು ॥೨॥

ಸಂಖ್ಯಾಗುಣಂಗಳ ನೋಡು । ಇನ್ನು
ಸೋಂಕಲಾಪವೆ ನಿನ್ನ ನಿಜದೊಳು ನೋಡು ।
ಕೊಂಕುಂಟೆ ? ಇಲ್ಲ ಮಾರ್ಪಾಡು । ಪರ
ಶಂಕರ ನೀನೈಯ ಸುಖದ ಕರುಮಾಡು ॥೩॥

## ಬೋಧಾಮೃತವು ಯಾರಿಗೆ ಸೊಗಸುವುದಿಲ್ಲ

ಮೂರುಗಳಿಗೆ ಬಾಳುವೀ ದೇಹ ತಾನೆಂಬ ।
ತೋರಿ ಹಾರುವ ಭೋಗ ತನದೆಂಬ ॥
ತೋರಿ ಹಾರುವ ಭೋಗ ತನದೆಂಬ ಮೋಹದ ।
ತೌರಿಗೆ ಬೋಧಾಮೃತವೇಕೆ ? ॥೧॥

ಎಲು ಮಜ್ಜೆ ಮಾಂಸ ರಕುತ ವೀರ್ಯ ಕೊಬ್ಬಿನ ।
ಹೊಲಸ ಮುಚ್ಚಿಹ ಮೈಗೆ ಮರುಳಾಗಿ ॥
ಹೊಲಸ ಮುಚ್ಚಿಹ ಮೈಗೆ ಮರುಳಾಗಿ ಮುಗ್ಗುವ ।
ಹೊಲೆಯಗೆ ಬೋಧಾಮೃತವೇಕೆ ? ॥೨॥

ಬೇಡಬಾರದ ಜನರೆಲ್ಲರ ಕಾಡುತ ।
ಬೇಡಿ ತಂದಿಹ ಧನ ಧಾನ್ಯದಿಂದ ॥
ಬೇಡಿ ತಂದಿಹ ಧನ ಧಾನ್ಯದಿಂದುಬ್ಬುವ ।
ಖೋಡಿಗೆ ಬೋಧಾಮೃತವೇಕೆ ? ॥೩॥

ಮೋಸ ಕಳವು ಕವಡಾಸೆಯು ಸಿಟ್ಟಿನ ।
ಪಾಶದ ಬಿಗಿತಕೆ ಕಟ್ಟು ಬಿದ್ದ ॥
ಪಾಶದ ಬಿಗಿತಕೆ ಕಟ್ಟುಬಿದ್ದಾತ್ಮವಿ ।
ನಾಶಿಗೆ ಬೋಧಾಮೃತವೇಕೆ ? ॥೪॥

ಗೆಳೆಯರು ಪಗೆಗಳು ಹಳಬರು ಹೊಸಬರು ।
ಬಳಿಯರು ಬಲುದೂರವಿವರೆಂಬ ॥
ಬಳಿಯರು ಬಲುದೂರವಿವರೆಂಬ ಕೆಸರಿನ ।
ಕೊಳಕಗೆ ಬೋಧಾಮೃತವೇಕೆ ?

## ಎಚ್ಚರಿಕೆಯಿಂದಿರು

ಎಚ್ಚರಿಕೆಯೊಳಿರು ನೆಚ್ಚದಿರಾರನು ।
ಬಿಚ್ಚು ನುಡಿಯ ಕೇಳು ಮರುಳಯ್ಯ ॥ಪ॥

ಹುಚ್ಚಾಟವ ಬಿಟ್ಟು ನಿಚ್ಚವು ನೆನೆನೀ ।
ಸಚ್ಚಿದಾನಂದನ ಮರುಳಯ್ಯ ॥ಅ॥

ಪುತ್ರಮಿತ್ರ ಬಂಧು ಭೃತ್ಯರು ಇಹರೆಂದು ।
ಮತ್ತನಾಗದಿರು ಮರುಳಯ್ಯ ।
ಕತ್ತಲೆ ಮನೆಯೊಳಗೊತ್ತರಿಸುತ ನಿನ್ನ ।
ನೆತ್ತಲೊ ಸರಿವರು ಮರುಳಯ್ಯ ॥೧॥

ಧನಧಾನ್ಯತುಂಬಿದೆ ಮನೆಯೊಳಗೆನ್ನುತ ।
ಕೊನೆಯುತಲಿರುವೆಯ ಮರುಳಯ್ಯ ।
ಹಣಪೊಲಮನೆಯೆಲ್ಲವನಿಲ್ಲಿಯೆ ಬಿಟ್ಟು ।
ಕೊನೆಗೆ ನೀ ಹೆಣವಾಗುವೆಯಲ್ಲೊ ॥೨॥

ಚಿನ್ಮಯ ಶಂಕರಗುರುವಿನ ನಾಮವ ।
ನೊಮ್ಮನದಲಿ ನೆನೆ ಮರುಳಯ್ಯ ।

ಜನ್ಮಕರ್ಮಬಂಧನಿರ್ಮುಕ್ತನಾಗುತ ।
ಬ್ರಹ್ಮವೆ ಆಗುವೆ ಮರುಳಯ್ಯ ॥೩॥

## ಭಗವಂತ

ಭಗವಂತನಾರೆಂಬ ಬಗೆಯ ಪೇಳುವೆ ಕೇಳಿ ।
ಸಗುಣ ನಿರ್ಗುಣನಾ ಭಗವಂತ ॥ ॥ಪ॥

ಬಗೆಗಂಡವನಿದ ನಗುತ ಜೀವಿಸುತಿದ್ದು ।
ಹೊಗುವನಾತನೊಳೇ ಮತಿವಂತ ॥ ॥ಅ॥

ಹುಟ್ಟು ಹೊಂದುಗಳಿಲ್ಲದಾ ಜೀವರುಗಳು ।
ಹುಟ್ಟಿ ಹುಟ್ಟಿ ಮರೆಯಾಗುವದ ॥
ನಿಟ್ಟಿಸಿನೋಡದೆ ನೆಟ್ಟನರಿಯಬಲ್ಲ ।
ದಿಟ್ಟನು ಸರ್ವಜ್ಞ ಭಗವಂತ ॥೧॥

ಪ್ರಾಣಿಗಳೆಲ್ಲ ಪುಣ್ಯಾಪುಣ್ಯ ಕರ್ಮದ ।
ನೇಣಿನ ಸೆಳೆತಕೆ ಸಿಲುಕುತಲಿ ॥
ಗಾಣದೆತ್ತಿನಂತೆ ತಿರುಗುವದರಗುಟ್ಟ ।
ಮಾಣದೆ ಅರಿಯುವ ಭಗವಂತ ॥೨॥

ವಿದ್ಯೆಗವಿದ್ಯೆಗೆ ಸಾಕ್ಷಿಯಾಗಿಹ ನಿತ್ಯ ।
ವಿದ್ಯಾರೂಪನಾ ಭಗವಂತ ।
ಸದ್ಯೋಮುಕ್ತಿಯನಿತ್ತು ಭಕ್ತರಿಗೊಲಿವಾ ।
ಹೃದ್ಯ ಶಂಕರನಾ ಭಗವಂತ ॥೩॥

[ಪ್ರಾಣಿಗಳು ತಮ್ಮ ತಮ್ಮ ಕರ್ಮಗಳಿಗೆ ಪರವಶರಾಗಿ ಹುಟ್ಟುತ್ತಲೂ ಸಾಯುತ್ತಲೂ ಇರುವದರ ತತ್ವವನ್ನೂ, ಧರ್ಮಾಧರ್ಮಪರವಶರಾಗಿ ಮತ್ತೆ ಮತ್ತೆ ಕಾಮಕ್ರೋಧಾದಿ ಸಂಸಾರದಲ್ಲಿ ಸಿಕ್ಕಿ ಜನ್ಮಬಂಧಕ್ಕೆ ಒಳಗಾಗಿರುವದರ ತತ್ವವನ್ನೂ, ಪರಮಾರ್ಥ ವಿದ್ಯೆಯ ಮತ್ತು ಸರ್ವಾನರ್ಥ ಮೂಲವಾಗಿರುವ ಅವಿದ್ಯೆಯ ಸ್ವರೂಪವನ್ನೂ ಬಲ್ಲ ಸರ್ವಜ್ಞನೇ ಭಗವಂತನು.)

# ಪೂಜೆಯ ಮರ್ಮವ ಕೇಳಿ

**ಕಾಮವರ್ಧಿನಿ** — **ಛಾಪು**

ಪೂಜೆಯ ಮರ್ಮವ ಕೇಳಿ । ಭಕ್ತ ।
ರೋಜೆಯಿಂ ಪೂಜಿಸಿ ಸೊಗದೊಳು ಬಾಳಿ ॥ಪ॥

ಆವಾಹನೆಯೆಂಬುದಿಲ್ಲ । ಬಳಿ ।
ಕಾವಿಸರ್ಜನೆಯ ನೆರವು ಬೇಕಿಲ್ಲ ।
ದೇವನಾತ್ಮವು ನಮಗೆಲ್ಲ । ತಾನೆ ।
ತ್ರೀವೃತೆಲ್ಲೆಲ್ಲಿಯು ನೆಲಸಿಹನಲ್ಲ ॥೧॥

ಆಸನ ಪಾದ್ಯಗಳೇಕೆ ? ಅರ್ಘ್ಯ ।
ದಾಚಮನಾಭಿಷೇಕದ ಗೋಜೇಕೆ ?
ವಾಸುದೇವನಿಗದು ಬೇಕೆ ? ರೂಪು ।
ಮಾಸದ ನಿತ್ಯ ಶುದ್ಧಗೆ ಕರೆಸೋಕೆ ? ॥೨॥

ವಸ್ತ್ರೋಪವೀತವು ಬೇಡ । ಪರ ।
ವಸ್ತು ಬ್ರಹ್ಮಾಂಡವ್ಯಾಪಕನದ ನೋಡ ।
ಕಸ್ತೂರಿ ಗಂಧದ ಗಾಢ । ಲೇಪ ।
ವಿಸ್ತಾರ ನಿರ್ಲೇಪನಿಗೇನೂ ಬೇಡ

ಅಕ್ಷತಗಕ್ಷತೆಯುಂಟೆ ? ಲೋಕಾ ।
ಧ್ಯಕ್ಷನಿಗಾಭರಣಂಗಳ ಗಂಟೆ ?
ಸೂಕ್ಷ್ಮನಿಗೆ ಸುಮದಂಟೆ ? ಅಂಗ ।
ಮೋಕ್ಷನಿಗಂಗ ಪೂಜೆಯ ನಂಟೆ ? ॥೪॥

ನೀರಾಗನಿಗೆ ತಾಂಬೂಲ । ವಿಲ್ಲ ।
ನೀರಾಜನವು ಸ್ವಯಂಜ್ಯೋತಿಗಿಲ್ಲ ।
ಮೀರಿ ಪ್ರದಕ್ಷಿಣೆ ಸಲ್ಲ । ಮೇರೆ ।
ಮೀರಿಹ ಚಿದ್ರೂಪನಾತ ಬೇರಲ್ಲ ॥೫॥

ಕರಣಂಗಳೆಲ್ಲಕು ತಿರುಳು । ದೇವ ।
ನರಿತು ಪೂಜಿಪೆನೆಂಬ ಭಕುತನ ಕರುಳು ।
ಹೊರಗೆ ಪೂಜಿಪೆನೆಂಬ ಮರುಳು । ಬಿಟ್ಟು ।
ಹರಿಯ ಶಂಕರನ ನಿನ್ನೊಳೆ ಕಾಣುತೇಳು ॥೬॥

(ಪ್ರತಿಮಾದಿಗಳಲ್ಲಿ ಪೂಜಿಸುವಾಗಲೂ ಭಗವಂತನು ಸರ್ವವ್ಯಾಪಕನೆಂಬ ಬುದ್ಧಿಯಿರಬೇಕು. ಬಾಹ್ಯಾರ್ಚನೆಗಿಂತಲೂ ಭಕ್ತಿಯಿಂದ ತನ್ಮಯರಾಗುವವರ ಪೂಜೆಯು ಇನ್ನೂ ಹೆಚ್ಚಿನದು)

## ಉತ್ಸವ ಬಂದಿದೆ ನೋಡಿ

**ಸುರಟ್** ಛಾಪು

ಉತ್ಸವ ಬಂದಿದೆ ನೋಡಿ । ಪ್ರೇಮ । ದುತ್ಸಾಹದಾರತಿ ಮಾಡಿ ।
ಮತ್ಸರ ದೋಷವೀಡಾಡಿ । ಭಕ್ತ । ವತ್ಸಲನೊಳಗೊಂದುಗೂಡಿ ॥ಪ॥

ಹಣ್ಣುಕಾಯಿಗಳು ಬೇಕಿಲ್ಲ । ಮನ । ತಣ್ಣನೆ ತಣಿಯೆ ಸಾಕಲ್ಲ ।
ಹೊನ್ನು ದಕ್ಷಿಣೆ ಗರಜಿಲ್ಲ । ಪಾಪ । ಬನ್ನವಾಗುವದು ಸುಳ್ಳಲ್ಲ ॥೧॥

ಕಂಡನೆಂಬಗೆ ಕಾಣದೇವ । ಕೊಂಡು । ಕೊಂಡರೆ ಬರುವದೆ ಭಾವ ?
ಕೆಂಡಕಿರುವೆ ಮುತ್ತನೀವ । ಪರಿ । ಕಂಡುಕೊಳ್ವುದು ಚಿತ್ತ ಸಾವ ॥೨॥

ವಾದ್ಯದ ಘೋಷಗಳಿಲ್ಲ । ಶ್ರುತಿ । ವೇದ್ಯನೆ ಮೊದಲಲ್ಲವಲ್ಲ ।
ಬುದ್ಧಿಗೆ ನಿಲುಕುವನಲ್ಲ । ಇದ । ನುದ್ದಕೂ ನೋಡುವ ಬಲ್ಲ ॥೩॥

ನೋಡಲು ಮಾಯವಾಗುವನು । ದೇವ । ನೋಡುವನಲ್ಲಿಯೆ ಇಹನು ।
ಬೇಡಿದ ವರವನೀಯುವನು । ಬಾಳ । ನೀಡು ಸೊಗವ ಮಾಡುವನು ॥೪॥

ಇಲ್ಲಿ ಕಂಡರೆ ಸುಖವುಂಟು । ಕಂಡು । ದಿಲ್ಲವಾದರೆ ದುಃಖ ಗಂಟು ।
ಎಲ್ಲರೊಳಾತನ ನಂಟು । ಇದು । ಬಲ್ಲವ ಶಂಕರಗಂಟು ॥೫॥

# ಪರಮೇಶ್ವರನಲ್ಲಿ ಮೊರೆ

**ಮುಖಾರಿ** **ಆಟತಾಳ**

ಬಿಡಬೇಡ ಬಿಡಬೇಡ । ಬಿಡುಗಣ್ಣರರಸ ॥ಪ॥

ಕಡುಪಾಪಿಯಾದೆನ್ನ । ಕೆಡುವ ದಾರಿಯೊಳಿನ್ನು ॥ಅ॥

ಒಡಲ ಕರಣಂಗಳ ವ್ಯಡನೆ ದಯದೊಳಿತ್ತೆ ।
ನಡೆವ ಹಾದಿಯನರಿವ ಮನವನಿತ್ತೆ ॥
ಪಡಬಾರದ ಬಾಧೆಪಡಿಸುವ ವಿಷಯದ ।
ಕಡಲ ದಾಂಟಿಸದೆ ನೀ ನಡುವೆಯೊಳೆನ್ನ ಕೈ ॥೧॥

ವೇದ ಶಾಸ್ತ್ರಗಳನೋದಿದ ಮಾತ್ರದಿ ।
ಮಾದೇವ ನಿನ್ನ ಪ್ರಸಾದದ ಹೊರತು ॥
ಸಾಧುಮಾರ್ಗವು ತೋರ್ಪುದೇ ದಯಾನಿಧಿ ನಿನ್ನ ।
ಪಾದಸೇವೆಯ ಮರೆಯ ವಾದವಿದ್ಯೆಯೊಳೆನ್ನ ॥೨॥

ಜನುಮ ಜನುಮಗಳೆನಿತೋ ಜನಗಳ ಸೇವಿಸಿ ।
ಧನ ಮನೆಯಧಿಕಾರವನುಭವಿಸಿಹೆನು ॥
ಮನುಮಥಾರಿಯೆ ಮತ್ತೆ ಕನಸಿನ ಭೋಗಕೆ ।
ಮನ ಸೋತು ನರಕಭಾಜನನಾಗುವಂತೆನ್ನ

ಉನ್ನತ ಗುಣಗಣವನ್ನು ಬೆಳಗುವಂಥ ।
ನಿನ್ನ ನಾಮವ ಮರೆದನ್ಯರ ಪೊಗಳಿ ॥
ಎನ್ನ ನಾಲಗೆ ಕಶ್ಮಲಾನ್ನವ ಬಯಸುವ ।
ಕುನ್ನಿಯ ಪರಿಗೈದುದಿನ್ನಿಂತು ದುರಿತಕೆ ॥೪॥

ನಾಯ ಚಂಡಾಲರ ಸ್ತ್ರೀಯ ನಂಜನಗೂಡ ।
ರಾಯ ನೀನಂತು ನಿರ್ವಾಯದಿ ಸಲಹಿ ॥
ಸಾಯುವ ಹುಟ್ಟುವ ಮಾಯೆಯೊಳೆನ್ನನು ।
ಬೇಯ ಬಿಡುವದಿದು ನ್ಯಾಯವೆ ? ಕರುಣಾಳು ॥೫॥

# ನೀನೇ ಸಕಲ ವಿಶ್ವಕಾಧಾರ

ನೀನೇ ಸಕಲ ವಿಶ್ವಕಾಧಾರ ||ಪ||

ತೃಣದಲಿ ನೀನೇ ವನದಲಿ ನೀನೇ । ಘನಗಿರಿ ನೀನೇ ಉದಾರ ||೧||
ಜಲದಲಿ ನೀನೇ ನೆಲದಲಿ ನೀನೇ । ನೆಲಸಿಹೆ ನಭದಲಿ ಪೂರ ||೨||
ಸೋಮ ಸೂರ್ಯ ನಕ್ಷತ್ರವು ನೀನೇ । ವ್ಯೋಮವು ನಿನ್ನ ವಿಸ್ತಾರ ||೩||
ಸ್ಥಾವರ ಜಂಗಮ ಜೀವರೆಲ್ಲರೂ । ಭಾವಿಸೆ ನಿನ್ನಾಕಾರ ||೪||
ನಿನ್ನದೆ ಶಂಕರ ಜಗದೀ ಬಾಳುವೆ । ನಿನ್ನಯ ಮಹಿಮೆ ಅಪಾರ ||೫||

# ಏಳಯ್ಯ ಬೆಳಗಾಯಿತು

## (ಉದಯರಾಗದ ಧಾಟಿ)

ಭೂಪಾಳಿ ಝಂಪೆ

ಏಳಯ್ಯ ಬೆಳಗಾಯಿತು ||ಪ||
ಏಳು ಜೀವರ ಜೀವ । ಏಳು ದೇವರ ದೇವ ।
ಏಳುಲೋಕವ ಕಾವ ಸುಪ್ರಭಾವ ||ಅ||

ದೊರೆವೆತ್ತ ಕೋಟೆಯೆಂಟರ ಸುತ್ತಿನೊಂಬತ್ತು ।
ಮೆರೆವ ಬಾಗಿಲ ದುರ್ಗವೆಂದೆನಿಸಿಹ ॥
ಶರಿರಪುರದೊಳು ಹೃದಯಮಂದಿರದ ಮಂಚದಲಿ
ಭರದಿಂದೆ ತನಿನಿದ್ರೆಗೈದುದಾಯ್ತು ||೧||

ನಾನು ನನ್ನದಿದೆಂಬ ಹೀನೋಚ್ಚಭಾವಗಳ ।
ಮಾನಸದೆ ಕಲ್ಪಿಸುವ ಕನವರಿಕೆಯು ॥
ಮಾಣುತ್ತಲೆಚ್ಚತ್ತು ನೀ ನಿಜವ ನೋಡಿ ದು ।
ಮ್ಮಾನವನು ನೀಗಿ ನಲಿದಾಡು ದೇವ ||೨||

ಅಜನನಿದ್ರನು ನೀನು ನಿಜದಿನದ್ವೈತ ನೀ ।
ತ್ರಿಜಗವೆಂಬುದು ನಿನ್ನ ಮಾಯೆಯೆಂದು ॥
ಗಜಬಜಿಸುತಿರೆ ನಿಗಮ ಭಜಕರೆಲ್ಲರು ಹೊಗಳೆ ।
ತ್ಯಜಿಸಿ ಮರಹಿನ ಮುಸುಕನುಪ್ಪವಡಿಸು ||೩||

ವೇದವೆಂಬುವ ಪಕ್ಕಿಯಾದರದೊಳುಲಿಯುತಿರೆ ।
ಬಾದರಾಯಣನೆಂಬ ಕೋಳಿ ಕೂಗೆ ॥
ವಾದಿಗಳ ಶುಭವಾದ್ಯ ನಾದವಾಗಲು ಕೇಳಿ ।
ಹೇ ದಯಾನಿಧಿ ಕಣ್ಣ ತೆರೆದು ಬೇಗ ॥೪॥

ಅದು ನೀನೆಯಹೆಯೆಂಬ ಸದಯ ಸದ್ಗುರು ಕರುಣ ।
ದೊದವಿನರುಣೋದಯವು ಪೂರ್ವದಲ್ಲಿ ॥
ಇದೆಕೊ ತೋರಿತು ತತ್ತ್ವವಿದರರಿವಿನೆಳನೇಸ ।
ರುದಿಸಿತ್ತು ನೆರೆ ನೋಡು ಶಂಕರೈಕ್ಯ

[ಜೀವರ ಜೀವ-ಜೀವರು ಬದುಕಿರುವದಕ್ಕೆ ಕಾರಣ, ದೇವರ ದೇವ-ದೇವತೆಗಳ ಮಹಿಮೆಗೆ ಮೂಲಕಾರಣ.

೧. ದೊರೆವೆತ್ತ-ಪ್ರಸಿದ್ಧವಾದ, ಕೋಟೆ ಎಂಟು-ಚರ್ಮ, ರಕ್ತ, ಮಾಂಸ ಮೇದಸ್ಸು, (ಕೊಬ್ಬು) ಅಸ್ಥಿ (ಎಲುಬು), ಮಜ್ಜ (ಮೆತ್ತನೆ ಎಲುಬು), ಶುಕ್ಲ-ರೇತಸ್ಸು, ಓಜಸ್ಸು-ವೀರ್ಯ. ಒಂಬತ್ತು ಬಾಗಿಲು-ತಲೆಯಲ್ಲಿ ಏಳು, ಕೆಳಗೆ ಎರಡು ತನಿನಿದ್ರೆ-ಕನಸಿಲ್ಲದ ನಿದ್ರೆ. ೨. ಮಾಣುತ್ತ-ಬಿಡುತ್ತ, ದುಮ್ಮಾನ - ವ್ಯಸನ. ೩. ಅಜನು-ನಿರ್ವಿಕಾರನು, ಅನಿದ್ರನು-ಅಜ್ಞಾನರಹಿತ, ಗಜಬಜಿಸುತಿರೆ ನಿಗಮ-ವೇದವು ಸಾರುತ್ತಿದೆ, ಉಪ್ಪವಡಿಸಿ-ಎದ್ದು, ೪. ಉಲಿಯುತಿರೆ ಕೂಗುತ್ತಿರಲು. ೫. ಅದು ನೀನೆಯಹೆ-ತತ್ತ್ವಮಸಿ, ಪರಮಾರ್ಥತತ್ತ್ವವು ನೀನೆ. ಒದವಿನ-ಪ್ರಾಪ್ತಿಯ. ಅರಿವಿನ -ಜ್ಞಾನದ. ಎಳನೇಸರು-ಬಾಲಸೂರ್ಯ. ಜೀವನು ಅನಾದಿನಿದ್ರೆಯೆಂಬ ಅವಿದ್ಯೆ ಯಿಂದ ನಿದ್ರಿಸುತ್ತಾ ಕನಸುಕಾಣುತ್ತಿದ್ದಾನೆ. ಶಾಸ್ತ್ರಾಚಾರ್ಯರ ಉಪದೇಶದಿಂದ ಅವನಿಗೆ ಜ್ಞಾನವಾಗುತ್ತದೆ.]

## ಬನ್ನಿ ಬನ್ನಿರೆಲ್ಲರು

**ಶಂಕರಾಭರಣ ನೋಟು** **ತ್ರಿಶ್ರಏಕತಾಳ**

ಬನ್ನಿ ಬನ್ನಿರೆಲ್ಲರು । ಬಿನ್ನಪವಿದ ಬಲ್ಲರು ॥ಪ॥

ಬನ್ನಿ ಬನ್ನಿ ಭವದ ಬೇಗೆ । ಯನ್ನು ತಾಳಲಾರದವರು ॥ಅ॥

ಹುಟ್ಟಿ ಹೊಂದಿ ಹುಟ್ಟಿ ಹೊಂದಿ । ಕೆಟ್ಟನಾಯಿ ನರಿಯು ಹಂದಿ ।
ಹೊಟ್ಟೆಗಾಗಿ ಸುತ್ತುವಂತೆ । ಕೆಟ್ಟು ತಿರುಗಲೊಲ್ಲದವರು ॥೧॥

ಸೋಮಯಾಗವನ್ನು ದುಡಿದು । ಸೋಮಲೋಕವನ್ನು ಪಡೆದು ।
ಭೂಮಿಗಿಳಿದು ಮತ್ತೆ ನಿಯಮ । ದಾಮಂದೆಳೆತಕೆಳಸದವರು ॥೨॥

ದೇವಯಾನದಿಂದ ಬ್ರಹ್ಮ । ದೇವಲೋಕದಲ್ಲಿ ತಮ್ಮ ।
ತಾವ ಸೇರಿ ಸೊಗವನಡೆವ । ಬೇವಸವನು ಬೇಡದವರು ॥೩॥

ಕನ್ನಡಿಯೊಳು ತೋರ್ಪ ಗಂಟು । ತನ್ನದೆಂಬುದೆಲ್ಲಿಯುಂಟು ? ।
ಕುನ್ನಿಯಂತೆ ಭಾವನೆಗಳ । ನಿನ್ನು ಮಾಡೆವೆನ್ನುವವರು ॥೪॥

ನಿತ್ಯಶುದ್ಧಬುದ್ಧಮುಕ್ತ । ಸತ್ಯರೂಪ ತರ್ಕಯುಕ್ತ ।
ಸತ್ಯವೇದಾಂತಶಂಕ । ರೋಕ್ತಿಯಿಂದ ಭಜಿಸುವವರು ॥೫॥

[ಹೊಂದಿ–ಸತ್ತು, ಸೋಮಲೋಕ–ಪಿತೃಲೋಕ, ಬೇವಸ–ಬೇಸರ, ಸತ್ಯರೂಪ–ಸತ್ಯವಾದ ರೂಪವನ್ನು, ವೇದಾಂತಶಂಕರೋಕ್ತಿ-ಉಪನಿಷತ್ತುಗಳ ಸುಖಕರವಾದ ನುಡಿ.]

## ಕೆಡದಿರಿ ಬರಿದೇ

**ಹಿಂದೂಸ್ಥಾನಿ ಕಾಪಿ** **ಆದಿತಾಳ**

ಕೆಡದಿರಿ ಬರಿದೇ । ಜಡಮತಿಗಳಿರಾ ॥ಪ॥

ಪಡದಿರಿ ಕಷ್ಟವಿಂ । ತಡಿಗಡಿಗೆ ॥ಅ॥

ದೇಹವೆ ನೀವೆಂದೂಹಿಸಿ ಸುಮ್ಮನೆ । ಹಾಹೆಗಳಂದದಿ ಕುಣಿಯುತಿಹ ॥
ಮೋಹವ ನೀಗುವ ಸೋऽಹಂಜ್ಞಾನವ । ತಾಪ ವಿಚಾರಕೆ ಮನಗೊಡದೆ ॥೧॥

ಜಗವಿದು ಕನಸಿನ ಬಗೆಯೆನದಿಲ್ಲಿಯ । ಸೊಗವನೆ ನೆಚ್ಚುತ ಬಿಗುವಡೆವ ॥
ಮುಗುಧತೆಯಡಗುವ ಸೊಗಸಿನ ಸೂರೆಯ । ಮಿಗಿಲಹ ಬೋಧವ ಬರಗೊಡದೆ ॥೨॥

ಮೂರು ಗುಣಂಗಳ ತೋರುವ ಮಾಯಾಸಂ । ಸಾರದ ಬಲೆಯೊಳು ಬೀಳಿಸುವ ।
ಕಾರಣಾವಿದ್ಯೆಯ ಮೀರಿದ ಶಂಕರ । ಚಾರುಚರಣದೆಡೆ ಪೊಡೆಮಡದೆ ॥೩॥

[ಹಾಹೆ–ಬೊಂಬೆ, ತಾಪ–ತರುಪ, ಸೊಗ–ಸುಖ, ಬಿಡುವಡೆವ–ಬದ್ಧರಾಗುವ ಕಾರಣಾವಿದ್ಯೆ-ಸಂಸಾರಕ್ಕೆ ಮೂಲವಾದ ಆತ್ಮಾಜ್ಞಾನ, ಪೊಡೆಮಡದೆ-ನಮಸ್ಕರಿಸದೆ.]

# ಮುಕ್ತಿಪಥದ ಕುರುಹು

**ಆರಭಿ** **ಆದಿತಾಳ**

ಮುಕ್ತಿಪಥದ ಕುರುಹ ಪೇಳ್ವೆ ಕೇಳಿರಯ್ಯ ||ಪ||

ಶ್ರುತಿ । ಯುಕ್ತಿ ಸ್ವಾನುಭವದೆ ಕಂಡು ಬಾಳಿರಯ್ಯ ||ಅ||

ಕಾಮುಕರ್ಮಪಾಶದೆಳೆತ ಕಾಣದಯ್ಯ । ಅಲ್ಲಿ ।
ನೇಮನಿಷ್ಠೆ ಶಾಂತಿದಾಂತಿ ಮಾಣದಯ್ಯ ||
ತಾಮಸರಾಜಸವಳಿದ ತಾಣವಯ್ಯ । ನಿಜ
ಧಾಮದೊಳೇ ಲಕ್ಷ್ಯವಿಟ್ಟ ಕೇಣವಯ್ಯ ||೧||

ನಾನು ನನ್ನದೆಂಬುದೇನೂ ಇಲ್ಲವಯ್ಯ । ಅಲ್ಲಿ ।
ಓನಪುಣ್ಯವೆಂಬುದೇನೂ ಸಲ್ಲದಯ್ಯ ||
ಮಾನಮೇಯಭಾವವಿಲ್ಲದೆಲ್ಲವಯ್ಯ । ತನ್ನ ।
ಭಾನವಾಗಿ ತೋರುತಿರ್ಪಗೆಲ್ಲವಯ್ಯ ||೨||

ಗುರುವು ಶಿಷ್ಯನೆಂಬ ಭೇದ ಸರಿವುದಯ್ಯ ||
ಅರಿವುದುರವಯಿಲ್ಲದರಿವ ತೆರನದಯ್ಯ । ಗುರುಶಂ ।
ಕರನ ನಂಬಿ ಸೊಗದೊಳಾಳ್ವ ಭರವದಯ್ಯ ||೩||

[ಮಾಣದು-ಬಿಡುವದಿಲ್ಲ, ಕೇಣ–ಮತ್ಸರ, ಪಟ : ಮಾನಮೇಯಭಾವವಿಲ್ಲದೆ-ಇದು ಪ್ರಮಾಣ, ಇದನ್ನು ಅರಿಯತಕ್ಕದ್ದು ಎಂಬ ಭೇದವಿಲ್ಲದೆ; ಗೆಲ್ಲ–ಜಯ, ಪೊದ್ದದೆ–ಸೇರದೆ, ಸೈಪು–ಪುಣ್ಯ, ಆಳ್ವ-ಮುಳುಗುವ, ಮುಕ್ತಿಮಾರ್ಗದಲ್ಲಿ ಕಾಮುಕರ್ಮಗಳಿಗಾಗಲಿ ಅಹಂಕಾರಮಮಕಾರಗಳಿಗಾಗಲಿ ಅಜ್ಞಾನಕ್ಕಾಗಲಿ ಅವಕಾಶ ವಿರುವದಿಲ್ಲ. ಜ್ಞಾನಾಜ್ಞಾನಗಳನ್ನು ಮೀರಿದ ಪರಮಾತ್ಮೈಕ್ಯವನ್ನು ಪಡೆಯುವದೇ ಅದರ ಗುರು.]

## ನಿಮ್ಮಲ್ಲಿಯೇ ಕಾಣಿರೋ

**ಮಾಯಾಮಾಳವಗೌಳ** **ಆದಿತಾಳ**

ನಿಮ್ಮಲ್ಲಿಯೆ ಕಾಣಿರೊ ಶಿವನ । ಮತ್ತೆ
ಲ್ಲಲ್ಲಿ ಅರಸಲೇಕವನ ॥ಪ॥

ಇಲ್ಲಿಯೆ ಇರುತ ಜಗವೆಲ್ಲವ ತುಂಬಿ ತಾ ।
ನಿಲ್ಲವೆನ್ನುವ ಹುಸಿಸೊಲ್ಲ ನಗುವನ ॥ಅ॥

ಎಚ್ಚರ ಕನಸುಗಳೆಂಬ । ಎರಡು ಬಗೆ
ಬಿಚ್ಚಿದ ವಿಷಯದ ತುಂಬ ಸೇರುತ ತನ್ನ ।
ಹೆಚ್ಚಿನರಿವಿನಿಂದಲುಂಬ ॥
ಮುಚ್ಚುಮರೆಯದೇನುಚ್ಚನೀಚಭೋಗ ।
ನಿಚ್ಚವುಣ್ಣುತಲತಿಸ್ವಚ್ಛವಾಗಿಹನ ॥೧॥

ಕನಸನೆಚ್ಚರವೆಂದು ಕಾಂಬ । ಮತ್ತರಿದೆದ್ದು ।
ಕನಸಿದೆಚ್ಚರವಲ್ಲವೆಂಬ । ಕಾಣುವದೆಲ್ಲ ।
ಕನಸಲ್ಲದಿರೆ ಮತ್ತೇನೆಂಬ ॥
ಕನಸಿನ ಕಾರ್ಯಕಾರಣ ಸಂಸಾರವ ।
ನೆನಸಿ ನಗುವ ಚಿದ್ಘನರೂಪನ ॥೨॥

ಮಾಯೆಯ ಜಗವೆಲ್ಲ ಕಳೆದು । ನಿದ್ರೆಯೊಳು ನಿ
ರ್ಮಾಯ ರೂಪವನೆ ತಾ ತಳೆದು ।
ಕಾಯಕ್ಲೇಶದಾಯಸವೆಲ್ಲವನುಳಿದು ॥
ಬೀಯವಿಲ್ಲದದ್ವಿತೀಯ ದೃಷ್ಟಿಯಲಪ್ಪ ।
ಮೇಯನೆನಿಪ ಸಾಮಗೇಯ ಶಂಕರನ ॥೩॥

[ಹುಸಿಸೊಲ್ಲ ನಗುವನ–ಸುಳ್ಳುಮಾತನ್ನು ಕೇಳಿ ನಗುವವನನ್ನು ೧. ಎಚ್ಚರ ಕನಸುಗಳಲ್ಲಿ ಹರಡಿರುವ ಎಲ್ಲಾ ವಿಷಯಗಳನ್ನೂ ತನ್ನ ಚೈತನ್ಯದಿಂದ ವ್ಯಾಪಿಸಿಕೊಂಡು, ಕಲ್ಪಿತವಾದ ಜೀವರೂಪದಿಂದ ವಿಷಯಗಳನ್ನು ಭೋಗಿಸಿದರೂ ಅದರ ಸೋಂಕಿಲ್ಲದೆ ನಿರ್ಮಲಸ್ವರೂಪನಾಗಿರುವನು. ೨ ಚಿದ್ಘನರೂಪನ–ಬರಿಯ ಚೈತನ್ಯವೇ

ಆಗಿರುವ. ೩. ಉಳಿದು–ಬಿಟ್ಟು, ಬೀಯುವಿಲ್ಲದ–ನಾಶವಿಲ್ಲದ, ಅಪ್ರಮೇಯ–ಪ್ರಮಾಣಗಳಿಗೆ ನಿಲುಕದ.]

# ಭಜ ನಿರಾಕಾರಂ

**ಖಮಾಚ್** **ಏಕತಾಳ**

ಭಜ ನಿರಾಕಾರಕರ್ತಾರಮ್ ।
ಭಜ ನಿಖಿಲಾಕಾರಮುದಾರಮ್ ॥ಪ॥

ಸತ್ಯಜ್ಞಾನಸುಖಾಮೃತಸಾರಮ್ ।
ಸಕಲಭೂತಭರ್ತಾರಮ್ । ಭಜ ॥೧॥

ನಾಮರೂಪಯೋರ್ವ್ಯಾಕರ್ತಾರಮ್ ।
ನಿಜಮಹಿಮ್ನೈಕಾಧಾರಮ್ । ಭಜ ॥೨॥

ಸೃಷ್ಟಿಸ್ಥಿತಿಲಯಸಂಧಾತಾರಮ್ ।
ಸಕಲಕಾಮಸುವಿದೂರಮ್ । ಭಜ ॥೩॥

ಪ್ರಕೃತಿದ್ವಯಚಿತಸಗುಣಾಕಾರಮ್ ।
ಪ್ರೇಮಮೂರ್ತಿಮವಿತಾರಮ್ । ಭಜ ॥೪॥

ಶ್ರುತಿಮಸ್ತಕಬೋಧಿತಸಂಚಾರಮ್ ।
ಶಙ್ಕರಪದದಾತಾರಮ್ । ಭಜ

[ನಿಖಿಲಾಕಾರ–ಸರ್ವರೂಪನಾದ. ಉದಾರಮ್–ಕೊಡುಗೈಯುಳ್ಳ ೧. ಸತ್ಯ ಜ್ಞಾನಾನಂದವೆಂಬ ಅಮೃತದ ಸಾರ ; ಸಕಲಪ್ರಾಣಿಗಳನ್ನೂ ಪೋಷಿಸುವಾತನು. ೨. ನಾಮರೂಪಗಳನ್ನು ಬಿಡಿಬಿಡಿಮಾಡುವನಾದರೂ ತನ್ನ ಮಹಿಮೆಯಲ್ಲಿಯೇ ತಾನಿರುವನು. ೩. ಸೃಷ್ಟಿಸ್ಥಿತಿಲಯಗಳನ್ನು ಏರ್ಪಡಿಸುವವನು ; ಯಾವ ಕಾಮಗಳೂ ಇಲ್ಲದವನು. ೪. ಪರ, ಅಪರ–ಎಂಬ ಎರಡು ಪ್ರಕೃತಿಗಳಿಂದ ಸಗುಣಾಕಾರನಾಗಿ ತೋರುವಾತನು, ಪ್ರೇಮದ ಮೂರ್ತಿಯಾಗಿರುವ ರಕ್ಷಕನು. ೫. ವೇದಾಂತಗಳು ತಿಳಿಯಹೇಳುವ ಸ್ವರೂಪದವನು, ಆನಂದರೂಪವಾದ ಮೋಕ್ಷವನ್ನು ಕೊಡುವಾತನು ಇಂಥ ನಿರಾಕಾರಕರ್ತೃವನ್ನು ಭಜಿಸಿರಿ ಎಂದರ್ಥ.]

## ಯೋಗವ ಪೇಳುವೆ

**ಜಂಝೂಟಿ** **ಆದಿತಾಳ**

ಯೋಗವ ಪೇಳುವೆ ಕೇಳಿ । ಶುಭಕರ ॥ಪ॥

ಯೋಗವಿದರಿನುಪಯೋಗವನರಿತು ಕು ।
ಯೋಗವ ಬಿಸುಡುತ ಬಾಳಿ । ಶುಭಕರ ॥ಅ॥

ದೇಹೇಂದ್ರಿಯದ ಸಮೂಹವು ಕನಸಿನ ।
ಕಾಹುರವೆಂದರಿತೇಳಿ । ಶುಭಕರ ॥೧॥

ಒಳಗೆ ಹೊರಗೆ ಎಂಬಳಿವೆಸಕದ ಮನ ।
ಹೊಳೆಯದ ನೋಟವ ತಾಳಿ । ಶುಭಕರ ॥೨॥

ಸೋಂಕದೇನುವನು ಶಂಕೆಯು ಕಾಣದ ।
ಶಂಕರಯೋಗದೊಳಾಳಿ । ಶುಭಕರ ॥೩॥

[ಯೋಗವನ್ನು ಬಲ್ಲವರಿಂದ ಇದರ ಉಪಯೋಗವನ್ನು ಅರಿತುಕೊಂಡು ಕುಯೋಗವ ಎಂದರೆ ಧರ್ಮಾಧರ್ಮಗಳ ಸಂಬಂಧವನ್ನು ದೂರವಾಗಿ ತಳ್ಳಿಬದುಕಿರಿ. ೨. ಕನಸಿನ ಕಾಹುರ–ಕನಸಿನ ಪ್ರವಾಹ. ೩. ಇದು ಒಳಗೆ, ಇದು ಹೊರಗೆ–ಎಂಬ ಮಾಯಾಕಲ್ಪನೆಯನ್ನು ಮಾಡುವ ಮನಸ್ಸೇ ತೋರದಂಥ ದೃಷ್ಟಿಯನ್ನು ಇಟ್ಟು ಕೊಳ್ಳಿರಿ. ೪. ಅನಾತ್ಮವಾದ ಏನನ್ನೂ ಮುಟ್ಟದೆ, ನಿಶ್ಶಂಕೆಯಿಂದ ಆನಂದಕರವಾದ ಯೋಗದಲ್ಲಿ ಮುಳುಗಿರಿ.]

## ಚಿದ್ಗಗನದೆ

**ಮುಖಾರಿ** **ಆದಿತಾಳ**

ಚಿದ್ಗಗನದೆ ಚಿತ್ತದ ನಡೆಮಾಡವು ಚಲಿಸುತಲಿದೆ ನೋಡಿ ॥ಪ॥

ಸದ್ಗತಿವಡೆವರು ಸಮಯವರಿತು ಶುಭಸಾಧನೆಯೊಡಗೂಡಿ ॥ಅ॥

ಅಡಿಗಡಿಗೆ ವಿವೇಕವನಭ್ಯಾಸಿಸಿ । ಕಡುವೈರಾಗ್ಯದೊಳು ॥
ತಡೆದು ಹೊರಗೆ ಹರಿದಾಡಗೊಡದೆ ಒಳ । ನಡೆಯಿರಿ ವೇಗದೊಳು ॥೧॥

ಮೈಗರೆಯುವದೊಂದೇ ಗಳಿಗೆಯೊಳಿದು । ಬೇಗನೆ ನೀವೇಳಿ ॥
ಈಗಲುಗಾಡಿತು ಹೋಗುವದಿದು ಸಮ । ನಾಗಿ ಎಳೆದುಕೊಳ್ಳಿ ॥೨॥

ಒಂದಕೆ ಮುಂದಕೆ ಜಿಡವಂತೆರಡೂ । ಸಂದಿಗೆ ಕೀಲಿಡಿರಿ ॥
ನಿಂದಿರುತಿರೆಯಾನಂದವದೆ ಒಗ್ಗದೆ । ಹೊಂದಿಸಿ ಹಿಡಿದಿಡಿರಿ ॥೩॥

ಎಚ್ಚರದಲಿ ಕುಳ್ಳಿರಿ ಸಡಿಮಾಡದೆ । ಬಿಚ್ಚಿಕೊಳ್ಳದಂತೆ ॥
ಒಚ್ಚತವಾಗಿಯೆ ನಿಶ್ಚಲವಾಗಲು । ಸಚ್ಚಿತ್ಸುಖ ಮುಂತೆ ॥೪॥

ಲಯ ವಿಕ್ಷೇಪ ಕಷಾಯರಸೇಚ್ಛೆಯ । ನಯದೆ ಬಿಡಿಸಿಕೊಂಡು ॥
ಜಯಶಂಕರಪದವಿದರೊಳೇ ನಲಿಯಿರಿ । ಭಯವಿರದಿದ ಕಂಡು ॥೫॥

[೧. ಚಿತ್ತೆಂಬ ಆಕಾಶದಲ್ಲಿ ಚಿತ್ತೆಂಬ ವಿಮಾನವು ಚಲಿಸುತ್ತಿರುವದು, ಬ್ರಹ್ಮನಿಷ್ಠೆ ಎಂಬ ಸದ್ಗತಿಯನ್ನು ಪಡೆಯಬೇಕೆನ್ನುವವರು ಸಕಾಲದಲ್ಲಿ ಉತ್ತಮಸಾಧನೆಯನ್ನು ಮಾಡಿಕೊಂಡು ಸಿದ್ಧರಾಗಿರಿ. ೧. ವಿವೇಕ, ವೈರಾಗ್ಯ-ಇವುಗಳ ಅಭ್ಯಾಸದಿಂದ ಮನಸ್ಸು ಒಳಗೆ ಹೋಗುವದಕ್ಕೆ ಅನುಕೂಲವಾಗುತ್ತದೆ. ೨. ಸ್ವಲ್ಪಹೊತ್ತಿನಲ್ಲಿಯೋ ಮರೆಯಾಗಿ ಕಾಣಿಸದೆ ಹೋಗಿಬಿಡುತ್ತದೆ ; ಎಚ್ಚರಿಕೆಯಿಂದ ಇದು ಕದಲದಂತೆ ನೋಡಿಕೊಳ್ಳಿರಿ. ೩. ಒಂದಕ್ಕೆ ಹೋಗುವದೆಂದರೆ ಲಯ. ಮುಂದಕ್ಕೆ ಹೋಗುವದೆಂದರೆ ವಿಕ್ಷೇಪ ; ಇವೆರಡೂ ಇಲ್ಲದೆ ಸುಮ್ಮನೆ ನಿಂತಿರುವಾಗ ಆಗುವ ಆನಂದವನ್ನು ಸವಿಯಬಾರದು, ಆಗ ಕಷಾಯಯುಕ್ತವಾಗಿರುತ್ತದೆ. ೪. ಬಿಚ್ಚಿಕೊಳ್ಳದಂತೆ_ಮತ್ತೆ ಚದರದ ಹಾಗೆ. ಒಚ್ಚತವಾಗಿ-ಸಮರಸವಾಗಿ, ಪೂರ್ಣವಾಗಿ ೫, ಚಿತ್ತವು ಅಡಗಿ ಹೋಗುವದು ಲಯ, ಚದರುವದು ವಿಕ್ಷೇಪ ; ಸಮಸ್ಥಿತಿಯಲ್ಲಿದ್ದರೂ ವಾಸನಾಯುಕ್ತವಾಗಿದ್ದರೆ, ಅದೇ ಕಷಾಯದೋಷ. ಆತ್ಮಸ್ವರೂಪವೇ ಆಗುವದಕ್ಕೆ ಹೋಗುವದು ಸಮಪ್ರಾಪ್ತಿ, ಅದರ ಸುಖವನ್ನು ಸವಿಯದೆ ಇದ್ದರೆ ಕೊನೆಗೆ ನಿಜವಾಗಿ ಬ್ರಹ್ಮರೂಪವಾಗುತ್ತದೆ.]

## ಏನಾದುದೊ ಕಾಣೆ ಜನಕೆ

### [ಕರುಣದಿ ಕಾಯೊ ಗೋಪಾಲ]

**ಬಿಲಹರಿ** **ಆಟತಾಳ**

ಏನಾದುದೊ ಕಾಣೆ ಜನಕೆ ॥ಪ॥

ಬ್ರಹ್ಮ । ಜ್ಞಾನವೇತಕೆ ಸೇರದಾದುದೊ ಮನಕೆ ॥ಅ॥

ಕೊಳೆಮೆಯ್ಯು ತಾವೆಂಬರಲ್ಲ । ಅರೆ ।
ಗಳಿಗೆಯೊಳಿದು ಬಿದ್ದು ಹೋಗುವದಲ್ಲ ॥
ಅಳಿವಿಲ್ಲ ಪರಿಶುದ್ಧರೆಲ್ಲ । ಇದ ।
ತಿಳಿದು ತಿಳಿದು ಮೋಹಕೆರಗುವರಲ್ಲ ॥೧॥

ಕರಣ ಪ್ರಾಣವು ಮನವೆಲ್ಲ । ಬರಿ ।
ಯರಿವಿಲಿ ತೋರುವ ಮಾಯೆ ಮತ್ತಿಲ್ಲ ॥
ಒರುನಿದ್ದೆಯಲಿ ಬ್ರಹ್ಮವೆಲ್ಲ । ರಾತ್ರಿ ।
ಯರಿತ ಭಾವಿಗೆ ಹಗಲೇ ಬೀಳುವರಲ್ಲ ॥೨॥

ತಾನು ತನ್ನದಿದೆಂಬ ಸಲ್ಲ । ದಭಿ ।
ಮಾನವೊಂದಕೆ ಸಿಕ್ಕಿ ಸೊರಗುವರಲ್ಲ ॥
ಆ ನಿಗಮಾಂತದ ಸೊಲ್ಲ । ಕಡೆ ।
ಗಾಣುವರೇಕೋ ಶಂಕರನೋರ್ವ ಬಲ್ಲ ॥೩॥

[೧. ಕೊಳೆಮೈಯು - ಅಶುಚಿಯಾದ ದೇಹವನ್ನು; ಅಳಿವಿಲ್ಲ–ನಾಶವಿಲ್ಲ. ತಮ್ಮ ಸ್ವರೂಪವು ಶುದ್ಧವೆಂದು ತಿಳಿದೂ ವಿಷಯ ಮೋಹದಿಂದ ಅದರ ಮೇಲೆ ಬೀಳುತ್ತಿರುವರಲ್ಲ ! ೨. ಇಂದ್ರಿಯ ಪ್ರಾಣ ಮನಸ್ಸುಗಳು ಆತ್ಮನಲ್ಲಿ ತೋರುವ ಮಾಯೆ ಮಾತ್ರ ; ಇವು ನಿದ್ರೆಯಲ್ಲಿ ಬ್ರಹ್ಮವೇ ಆಗಿರುತ್ತವೆ. ಇದನ್ನು ಅನುಭವಿಸಿಯೂ ಮತ್ತೆ ವಿಷಯಕೂಪದಲ್ಲಿ ಬೀಳುತ್ತಿರುವರಲ್ಲ ! ೩. ನಾನು, ನನ್ನದು- ಎಂಬ ಅಯೋಗ್ಯವಾದ ಅಭಿಮಾನಕ್ಕೆ ಸಿಕ್ಕಿ ಕಷ್ಟಪಡುತ್ತಿದ್ದಾರೆ. ಪ್ರಸಿದ್ಧವಾದ ವೇದಾಂತ ವಾಕ್ಯವನ್ನು ಏತಕ್ಕೆ ಅಸಡ್ಡೆ ಮಾಡುತ್ತಾರೋ ದೇವರೇ ಬಲ್ಲ !]

## ಮರೆಯದಿರೋ ಮಾನವನೆ

**ಆನಂದಭೈರವಿ** **ಏಕತಾಳ**

ಮರೆಯದಿರೋ ಮಾನವನೆ ॥ಪ॥

ಮರಣವಿದೂರನು ನೀನೇ ॥ಅ॥

ಬಾಲ್ಯವು ಯೌವನ ಜರೆಯು । ಸ್ಥೂಲಶರೀರದೊಳಿರೆಯು ।
ಕಾಲವ ಮೀರಿರುವನು ನೀ । ಕಾಲಗೆ ಕಾಲನು ಎಂದೆಂಬುದ ॥೧॥

ಎಚ್ಚರ ನಿದ್ರೆಯು ಕನಸು । ನಿಚ್ಚವು ಮಾನಸಕಿನಿಸು ।
ಸ್ವಚ್ಛನಲೇ ತುರ್ಯನು ನೀ । ನಿಶ್ಚಲನೋರ್ವನೆ ಎಂದೆಂಬುದ ॥೨॥

ಜನುಮವಿಕಾರದ ದುಃಖ । ತನುವಿಗೆ ಸೇರಿತು ಲೆಕ್ಕ ।
ಚಿನುಮಯ ಶಂಕರಗುರು ನೀ । ಮುನಿಗಣಸೇವ್ಯನೆ ಎಂದೆಂಬುದ ॥೩॥

[೧. ಬಾಲ್ಯ, ಯೌವನ, ಮುಪ್ಪು-ಇವು ಸ್ಥೂಲ ಶರೀರಕ್ಕೆ, ನೀನು ಕಾಲವನ್ನು ಮೀರಿರುವೆ ; ಕಾಲಕಾಲ-ಕಾಲನಾಶಕ. ೨. ಇನಿಸು-ಇಷ್ಟು. ಜಾಗ್ರದಾದ್ಯವಸ್ಥೆಗಳು ಮೂರೂ ಮನಸ್ಸಿನ ವೃತ್ತಿಗಳು : ನೀನು ಇವನ್ನು ಮೀರಿರುವ ನಿಶ್ಚಲವಾದ ಅದ್ವಿತೀಯ ತುರೀಯಾತ್ಮನು. ೩. ಹುಟ್ಟೀ ಮುಂತಾದ ಆರು ವಿಕಾರಗಳು ಶರೀರಕ್ಕೆ ಸೇರಿರುತ್ತವೆ, ನೀನು ಚಿನ್ಮಯನಾದ ಪರಮಾತ್ಮನೇ.]

## ಇಲ್ಲದ ವಿದ್ಯೆಯಿದು

### [ನಾನೇನು ಮಾಡಿದೆನೊ ರಂಗಯ್ಯ]

**ಮೋಹನ** **ಆದಿತಾಳ**

ಇಲ್ಲದವಿದ್ಯೆಯಿದು । ಜಗದೊಳ । ಗೆಲ್ಲರ ಬಾಧಿಪುದು ॥ಪ॥

ಇಲ್ಲದವಿದ್ಯೆಯನುಳ್ಳುದ ಮಾಡುತ ।
ಬೆಲ್ಲದ ಕಹಿಯೆಂದೊಲ್ಲದೆ ಕೊರಗುವ । ರಿಲ್ಲದವಿದ್ಯೆ.... ॥ಅ॥

ಕನಸಿದೆಚ್ಚರೆಂಬ । ಭೇದವನೇ । ತನಗಿದಿರೊಳು ಕಾಂಬ ॥
ಇನಿಸತಿಶಯವಿರದನುಪಾಧಿಕದರಿ ।
ವಿನಲಿರುವೆನಗೇ ಘನತರತಮವೆಂ । ಬಿಲ್ಲದವಿದ್ಯೆ.... ॥೧॥

ಎಲ್ಲೆಲ್ಲಿಯುಮಿರದು । ಮರಹು ತ । ನ್ನಲ್ಲಿ ತೋರ್ಪುದರಿದು ॥
ಬಲ್ಲರ ಬಲ್ಲಹ ತಾನಹೆ ದಿಟದಿಂ ।
ದೆಲ್ಲಾ ಕಡೆಯೊಳು ಹೊಲ್ಲೆಹವೇನಿಹು । ದಿಲ್ಲದವಿದ್ಯೆ.... ॥೨॥

ನೋಡುವ ನಾನಲ್ಲ । ನನ್ನುಳಿದಿದ । ನೋಡುವ ಪೆರನಿಲ್ಲ ॥
ನೋಡದ ವೊಲಕಿಪ ಕೋಡಿದು ಶಂಕರ ।
ನಾಡಿದ ಗಾಢೋಕ್ತಿಯು ಸಟೆಯಲ್ಲ ॥೩॥

[ಇಲ್ಲದೆ ಇರುವ ಅವಿದ್ಯೆಯನ್ನು ಇದೆ ಎಂದು ಮಾಡಿಕೊಂಡು ಆನಂದಸ್ವರೂಪ ವಾದ ಆತ್ಮಸ್ಥಿತಿಯನ್ನು ಬೇಡವೆಂದು ಕೊರಗುತ್ತಾರೆ. ೧. ಇನಿಸತಿಶಯವಿರದ_ ಸ್ವಲ್ಪವೂ ಮಿಗಿಲಿಲ್ಲದ. ಕನಸು, ಎಚ್ಚರ-ಎರಡನ್ನೂ ವಿಷಯವಾಗಿ ಕಾಣುತ್ತಿರುವ ಯಾವದೊಂದು ಉಪಾಧಿಯ ಸಂಗೂ ಇಲ್ಲದ ಚೈತನ್ಯಸ್ವರೂಪನಾಗಿದ್ದರೂ ನನಗೆ ಗಾಢವಾದ ಅಜ್ಞಾನವಿದೆ ಎನ್ನುವ ಅವಿದ್ಯೆಯಿದು. ೨. ಅವಿದ್ಯೆಯು ಮತ್ತೆಲ್ಲಿಯೂ ಇರಲಾರದು. ಆತ್ಮನಲ್ಲಿಯೂ ತೋರಲಾರದು. ಚೇತನಸ್ವರೂಪವಾಗಿರುವವರೆಲ್ಲರ ಚೈತನ್ಯಸ್ವರೂಪನಾಗಿ ಎಲ್ಲೆಲ್ಲಿಯೂ ಇರುವವನು ನಾನು, ಇದು ಸುಳ್ಳಲ್ಲ. ಆದ್ದರಿಂದ ನನಗೆ ಅವಿದ್ಯೆಯಿರುವದೆಂಬುದು ಸುಳ್ಳು. ೩. ನಾನು ಏನನ್ನೂ ನೋಡದೆ ಇರುವ ಕೂಟಸ್ಥಚೈತನ್ಯನಾದ ಪರಮಾತ್ಮನೇ ಆಗಿರುವೆನು ; ನನ್ನನ್ನು ಬಿಟ್ಟು ವಿಷಯಗಳನ್ನು ನೋಡುವ ಜೀವನು ಮತ್ತೊಬ್ಬನಿಲ್ಲ. ಎಂದೆಂದಿಗೂ ಕಾಣದೆ ಇರುವ ವೊಲಕ್ಕೆ ಕೋಡಿದೆ ಎಂಬಂತಿದೆ, ಈ ಅವಿದ್ಯೆ. ಹೀಗೆಂದು ಶಂಕರಗುರು ಹೇಳುತ್ತಾನೆ, ಇದು ಎಂದಿಗೂ ಸುಳ್ಳಲ್ಲ.]

## ನೀನೇ ಬ್ರಹ್ಮ

### [ನೀನೇನೇ ರಾವಣನೆಂಬಾತನು]

**ದ್ವಿಜಾವಂತಿ** **ಆದಿತಾಳ**

ನೀನೇ ಬ್ರಹ್ಮ ನಿದಾನಿಸಿ ನೋಡೆಲೊ ।
ಮಾನವ ಯುಕ್ತಿಯಲಿ ॥
ಸ್ವಾನುಭವಕೆ ಶ್ರುತಿಮಾನವ ಹೊಂದಿಸು ।
ತಾನಂದಾಮೃತಪಾನವ ಗೈಯಲು ॥ಪ॥

ನಿನ್ನೊಳು ಮಾನಸಬಿನ್ನವೃತ್ತಿ ಸಂ ।
ಭಿನ್ನವಾಗಿ ಜಗವು ॥
ಚಿನ್ನಿಸದೊಡದೇಂ ನನ್ನಿಯುಹುದೇ ? ಮನ ।
ದುನ್ಮನೀಭಾವದೊಳಿನ್ನು ಲಯಿಸಲದ ॥೧॥

ದೇಶಕಾಲಪರಿಭಾಷಿತಜಗವಿದ ।
ಶೇಷವು ಬರಿಗನಸು । ಭಾಸವಿಲ್ಲ ನಿನ್ನಾ ಸುಷ್ಪ್ತಿಯೊಳಿದು ॥
ನೀ ಸುಖರೂಪಸರ್ವೇಶನೋರ್ವನಿಹೆ ॥೨॥

ಮರಪರಿವಿನ ಪರಿಯರಿಯದ ಪರಮ ಸಂ ।
ಸರಣಶೂನ್ಯ ನೀನು ॥

ಗುರುಗಳ ಗುರು ಶಂಕರ ನಿರ್ದ್ವಂದ್ವನು ।
ದೊರೆವಡೆದಿಹೆ ನಿನ್ನರಿಕೆಯ ಮೈಮೆಯೊಳ್ ॥೩॥

[ಅನುಭವಕ್ಕೆ ಶ್ರುತಿಪ್ರಮಾಣವನ್ನು ಹೊಂದಿಸಿಕೊಂಡು ನೋಡುತ್ತಾ ಆನಂದಾಮೃತರಸವನ್ನು ಪಾನಮಾಡುತ್ತಿದ್ದರೆ ನೀನೇ ಬ್ರಹ್ಮ. ೧. ಮನಸ್ಸಿನ ಬೇರೆಬೇರೆಯ ವೃತ್ತಿಗಳು ನಿನ್ನಲ್ಲಿ ಸೇರಿಕೊಂಡದ್ದರಿಂದ ಜಗತ್ತು ಸ್ಫುಟವಾಗಿ ಕಂಡುಕೊಳ್ಳುತ್ತಿರುವ ಮಾತ್ರದಿಂದ ನಿಜವಾದೀತೆ ? ಮನಸ್ಸನ್ನು ಮನಸ್ಸಲ್ಲದಂತೆ ಉನ್ಮನೀಭಾವವನ್ನು ಮಾಡಿ ಕೊಂಡು ಆತ್ಮನಲ್ಲಿಯೇ ಲಯಿಸಿಕೊಂಡರೆ ನೀನೇ ಬ್ರಹ್ಮ. ೨. ಅಲ್ಲಿ, ಇಲ್ಲಿ ; ಆಗ, ಈಗ-ಎಂಬ ವ್ಯವಹಾರದಿಂದ ಕಾಣುವ ಜಗತ್ತೆಲ್ಲವೂ ಕನಸಿನಂತೆ ಮಿಥ್ಯೆ. ಇದು ನಿನ್ನ ತನಿನಿದ್ರೆಯಲ್ಲಿಲ್ಲ, ನೀನು ಮಾತ್ರ ಆನಂದರೂಪನಾಗಿ ಸರ್ವೇಶ್ವರನಾಗಿರುವೆ. ೩. ಜ್ಞಾನಾಜ್ಞಾನಗಳನ್ನು ಕಾಣದೇಇರುವ ಅಸಂಸಾರಿಪರಮಾತ್ಮನು ನೀನು. ಗುರುಗಳಿಗೆಲ್ಲ ಗುರುವಾಗಿ, ದ್ವಂದ್ವಾತೀತನಾಗಿ ನಿನ್ನ ಚೈತನ್ಯರೂಪಮಹಿಮೆಯಲ್ಲಿಯೇ ಇದ್ದು ಕೊಂಡಿರುವ ಶಂಕರನೇ ನೀನು.]

## ಕಾಲನಾಟ

**ಹಿಂದೂಸ್ಥಾನಿ ಕಾಪಿ** **ರೂಪಕ**

ಕಾಲನಾಟವ । ನೋಡಿರಿಂದ್ರು । ಜಾಲಕೂಟವ ॥ಪ॥

ಕಾಲನಾಟವ ನೋಡಿ ತಿಳಿಯೆ । ಕಾಲಕಾಲರಹರಾಕ್ಷಣದಿ ॥ಅ॥

ಹಗಲುರಾತ್ರಿ ಪಕ್ಷತಿಂಗ । ಳುಗಳು ಋತುಗಳಯನ ವರುಷ ॥
ಮಗುಳೆಮಗುಳೆ ತೋರೆ ತಿರುಗುತ । ತಿಗುರಿಯಂದವ ತಾಳುತಿರ್ಪ ॥೧॥

ಆದಿಯಂತವೆರಡು ತೋರ । ದಾದ ರೂಪಿನಿಂದ ಜನರ ॥
ಬಾಧಿಸುತ್ತೆ ಕಾರ್ಯಕಾರಣ । ಭೇದಸ್ಥಿತಿಗೆ ಬೇರೆಂದೆನಿಸಿಹ ॥೨॥

ಮನಸಿನಿಂದಲೊಗೆದು ಬಹಳ । ಕನಸುಗಳನು ಕಾರಿ ಕಡೆಗೆ ॥
ಘನಸಮಾಧಿಸುಪ್ತಿಯಿಂದ । ಮನವ ಶಂಕರನಲ್ಲಿ ಕರಗಿಪ ॥೩॥

[ ಕಾಲನ ಆಟವು ಈ ಜಗತ್ತು, ಇದು ಕಣ್ಣುಕಟ್ಟಿನಿಂದ ತೋರಿದ ರೂಪು ; ಇದನ್ನು ತಿಳಿದುಕೊಂಡರೆ ಕಾಲಕಾಲನಾದ ಪರಮಾತ್ಮನೇ ಆಗುವರು. ೧. ಮಗುಳೆ ಮಗುಳೆ-ಮತ್ತೆಮತ್ತೆ. ದಿನ, ಪಕ್ಷ-ಮುಂತಾದವು ತಿಗುರಿಯಹಾಗೆ ಮತ್ತೆಮತ್ತೆ ಅದೇ ರೂಪವನ್ನು ತೋರುತ್ತಿರುವವು. ೨. ಕಾರ್ಯಕಾರಣಭಾವಕ್ಕೆಲ್ಲ ಇದೇ ಬೇರು. ೩. ಕಾಲವು ಮನಸ್ಸಿನಿಂದ ಹುಟ್ಟಿದೆ ; ಇದರಿಂದ ಎಚ್ಚರಕನಸುಗಳೆಂಬ ಕನಸುಗಳು ಹುಟ್ಟಿತೋರುತ್ತಿರುವವು. ಇದು ಸುಷುಪ್ತಿ ಸಮಾಧಿಗಳಲ್ಲಿ ಆತ್ಮನಲ್ಲಿಯೇ ಮನಸ್ಸನ್ನು ಲಯಗೊಳಿಸುತ್ತದೆ. ]

## ಸಾವಿಲ್ಲವೊ ಜೀವ

**ಪಂತವರಾಳಿ** **ಆದಿತಾಳ**

ಸಾವಿಲ್ಲವೊ ಜೀವ । ನಿನಗೆಂದಿಗು ॥ಪ॥

ಸಾವಿಲ್ಲವು ಪರಿಭಾವಿಸೆ ಜಗವೇ ।
ಸಾವ ಹುಟ್ಟುತಿಪ ತಾವೈಸಲೆ ನೀ ॥ಅ॥

ಗಡಿಗೆಯು ದೂಸರಿಂದ । ಬಯಲು ಬೇ ।
ರ್ಪಡುತಡಗುವ ಚಂದ ॥
ಅಡಿಗಡಿಗಾನುತೆ ಜಡದೇಹಂಗಳ ।
ಮಡಿವವೊಲಿರ್ದೊಡೇಂ ಬಿಡುಪುಸಿ ದುಗುಡವ ॥೧॥

ಕನಸುಮಾಯೆಯೊಳಗೆ । ದೇಹಂಗಳು ।
ನೆನೆಸಿಕೊಂಡ ಘಳಿಗೆ ॥
ಎನಿಸೊ ತೋರುತಲಿ ಕೊನೆಗಾಣುವ ಪರಿ ।
ತನುವಿದು ಬರಿದೇ ಮೊನೆದು ವ್ಯೈಗರೆವುದು ॥೨॥

ತನಿನಿದ್ರೆಯು ಸೋಗದೆ । ನೀನನುದಿನ ।
ತನುವಿನೊಳಗೆ ಸಿಗದೆ ॥

ಚಿನುಮಯನಹೆ ನೀನನಘಶಂಕರನ್ನೆ ॥
ಜನಿಮೃತಿಸಾಕ್ಷಿಯೆಂದನುಭವಸಿದ್ಧವು ॥೩॥

[ ಜಗತ್ತೇ ಹುಟ್ಟಿ ಸಾಯುತ್ತಿರುವ ಸ್ಥಾನವೇ ನೀನಲ್ಲವೆ ? ೧, ಗಡಿಗೆಯ ನಿಮಿತ್ತದಿಂದ ಬೇರೆಬೇರೆಯಾಗಿ ಕಂಡು ಕಾಣದಂತಾಗುವ ಆಕಾಶದಂತೆ ದೇಹಗಳ ಸಂಬಂಧದಿಂದ ಹುಟ್ಟಿಸಾಯುವಂತೆ ತೋರಿದರೂ ನಿನಗೆ ನಿಜವಾಗಿ ಸಾವಿಲ್ಲ. ಹುಸಿಯ ದುಃಖವನ್ನು ಬಿಡು. ೧. ಕನಸಿನಲ್ಲಿಯೂ ಮಾಯೆಯಲ್ಲಿಯೂ ದೇಹಗಳು ಹುಟ್ಟಿ ಹೋಗುವಂತೆ ಈ ದೇಹವು ಕಾಣಿಸಿಕೊಂಡು ಲಯವಾಗುತ್ತಿರುವದು. ೩. ನಿದ್ರೆಯ ಸುಖದಲ್ಲಿ ಸೇರಿಕೊಂಡು ದೇಹದ ಕಟ್ಟಿಗೆ ಸಿಕ್ಕದೆ ಚಿನ್ಮಯನೇ ಆಗುತ್ತಿರುವೆಯಲ್ಲವೆ ? ಹುಟ್ಟುಸಾವುಗಳಿಗೆ ನೀನು ಸಾಕ್ಷಿಯಾಗಿರುವೆಯೆಂಬುದು ಅನುಭವಸಿದ್ಧ. ]

## ಆತುಮನೋರ್ವನೆ ಸರಿ ಕಾಣಿರೊ

**ಖರಹರಪ್ರಿಯ** 	**ಆದಿತಾಳ**

ಆತುಮನೋರ್ವನೆ ಸರಿ ಕಾಣಿರೊ । ಜೀ ॥ಪ॥
ವಾತುಮನೇ ಪರಮನು ಕಾಣಿರೊ ॥ಅ॥
ಗಡಿಗೆಮಡಕೆಕುಡಿಕೆಗಳೆಂಬುವ । ಪೆಸರುಗಳ ।
ಬಿಡಿಬಿಡಿಯಾಗಿ ಬಯಲೆ ಕೊಂಬುವ ॥

ಪಡಿಯೊಳಗಾತುಮನೊಡಲಿನುಪಾಧಿಯಿಂ
ಕಡಿವಡೆಯದೆ ಪೆಸರಡೆಯುವನದರಿಂದ।ಲಾತುಮ... ॥೧॥

ನಾನಾರೂಪದ ಕೊಡನೊಳಗಿರುವ । ಬಯಲು ತಾ
ನಾನದೆ ರೂಪದ ಬೇರಿರುವ ॥
ಮಾನದೊಳಾತುಮ ಹೀನೋಚ್ಚರೂಪಗ ।
ಳೂಣೆಯವಿಲ್ಲದೆ ಕಾಣುವನದರಿಂದ । ಲಾತುಮ.... ॥೨॥

ಬಗೆಬಗೆ ಕೆಲಸವ ಸಮನಿಸುವ । ಪಾತ್ರೆಗಳಿಂದ ।
ಮಿಗಿಲಾಗಿ ಬಯಲು ತಾ ಸೊಗಯಿಸುವ

ಬಗೆಯಿಂದಲಾತುಮನೊಗೆದಾರುವಿಕೃತಿಯ ।
ಮಿಗುತೆ ಶಂಕರನಾಗಿ ಸೊಗವಿರ್ಪನದರಿಂದ॥ಲಾತುಮ.... ॥೩॥

[ ಆತ್ಮನೊಬ್ಬನೇ ಸರಿ ; ಜೀವಾತ್ಮನೇ ಪರಮಾತ್ಮ ಕಂಡಿರಾ? ೧. ಕೊಂಬುವ ಪಡಿಯೊಳಗೆ-ಹೊಂದುವಹಾಗೆ ; ಒಡಲಿನ-ಶರೀರದ. ಆಕಾರಕ್ಕೆ ಗಡಿಗೆ, ಮಡಕೆ-ಮುಂತಾದ ಹೆಸರುಗಳಾಗುವಂತೆ ಪರಮಾತ್ಮನೇ ಅವಿಚ್ಛಿನ್ನನಾಗಿದ್ದರೂ ಶರೀರವೆಂಬ ಉಪಾಧಿಯಿಂದ ಬೇರೆಬೇರೆಯ ಹೆಸರನ್ನು ಪಡೆಯುತ್ತಿರುವನು. ೨. ಆನದೆ-ಹೊಂದದೆ : ಊಣೆಯು-ದೋಷ ; ಬೇರೆಬೇರೆಯ ರೂಪದ ಕೊಡಗಳಲ್ಲಿರುವ ಆಕಾಶ ದಂತೆ ಆತ್ಮನು ಶರೀರದ ಹೀನೋಚ್ಚಭಾವಗಳ ದೋಷವಿಲ್ಲದೆ ಒಬ್ಬನೇ ಕಾಣುತ್ತಿದ್ದಾನೆ. ೩. ಸಮನಿಸುವ-ಮಾಡುವ ; ಮಿಗಿಲಾಗಿ-ಹೆಚ್ಚಾಗಿ, ಪಾತ್ರೆಗಳಿಗಿಂತ ಬೇರೆಯಾಗಿ ; ಆರು ವಿಕೃತಿಯ-ಹುಟ್ಟುವದು, ಇರುವದು, ಬೆಳೆಯುವದು, ಮಾರ್ಪಡುವದು, ಸೊರಗುವದು, ಹಾಳಾಗುವದು,-ಎಂಬ ವಿಕಾರಗಳನ್ನು ; ಸೊಗವಿರ್ಪನು-ಸುಖ ದಿಂದಿರುವನು. ಬೇರೆಬೇರೆಯ ಪಾತ್ರೆಗಳು ಬೇರೆಬೇರೆಯ ಕೆಲಸಕ್ಕೆ ಉಪಯೋಗ ವಾಗುತ್ತಿದ್ದರೂ ಅವುಗಳೊಳಗಿರುವ ಆಕಾಶವು ಅವುಗಳಿಗಿಂತ ಬೇರೆಯಾಗಿರುವಂತೆ, ದೇಹದ ಆರು ವಿಕಾರಗಳನ್ನೂ ಮೀರಿರುತ್ತಾನೆ. ಹೀಗೆ ನಾಮರೂಪಕರ್ಮಗಳ ಸಂಬಂಧವು ಆತ್ಮನಿಗೆ ಇಲ್ಲವೇಇಲ್ಲವಾದ್ದರಿಂದ ಅವನು ತನಗೆ ಎರಡನೆಯದಿಲ್ಲದ ಒಬ್ಬನೇ.]

## ಬರಿಯ ಬಯಕೆ

**ಕೇದಾರಗೌಳ** **ಆದಿತಾಳ**

ಬರಿಯ ಬಯಕೆ ಸಾಕುಮಾಡು ।
ಪೆರತಿನ್ನೇನು ಬೇಕು ನೋಡು ॥ಪ॥

ಸರುವನಾಗಿ ನಿರುತವಿರುವೆ ।
ನರನೆ ಬಯಲ ಭವಣೆ ತರವೆ ? ॥ಅ॥

ವ್ಯೋಮವಾಯುವಹ್ನಿವಾರಿ ।
ಭೂಮಿಗಳಿವು ನೀನು ಶೌರಿ ॥
ಕಾಮಕಾಮನಲ್ಲವಾಪ್ತ ।
ಕಾಮನೂ-ನೀ ಮನದೊಳು ನಿಜವನರಿತು ॥೧॥

ಲೋಕಲೋಕಪಾಲರೂಪ । ನೇಕ ನೀನೆ ವಿಗತತಾಪ
ಶೋಕಮೋಹವಿಲ್ಲ ಸೌಖ್ಯ ।
ದೇಕತಾನ-ನೇಕಿದ ನೀಂ ನಿರುಕಿಸದಿಹೆ ॥೨॥

ಯೋಗಿಯಾಗಿ ತಪವ ಮಾಳ್ಪೆ । ಭೋಗಿಯಾಗಿ ಸೊಗವನೋಳ್ಪೆ ॥
ತ್ಯಾಗಿಯಾಗುತಾತ್ಮನಿಷ್ಠ । ನಾಗುವೇ-ನೀಗಿ ಮನದ ಕನವರಿಕೆಯ ॥೩॥

ದೇಹಕರಣವಿಷಯವೆಲ್ಲ । ವ್ಯೂಹಿಸೆ ನೀನಲ್ಲದಿಲ್ಲ ॥
ಬಾಹಭೋಗಪೆರತಿದಲ್ಲ । ಬೇಹುದೇ–ನೀ ಹದನನು ನಿನ್ನೊಳರಿತು ॥೪॥

ನಿನ್ನ ಸಿರಿಯನಂತವಯ್ಯ । ಭಿನ್ನವೆಣಿಸದಿರು ದಮ್ಮಯ್ಯ ॥
ಬಿನ್ನಪವಿದ ತಿಳಿದು ನೋಡು ।
ನನ್ನಿಯಿಂ-ದಿನ್ನಹೆ ನೀಂ ಗುರು ಶಂಕರ ॥೫॥

[ಯಾವಾಗಲೂ ಸರ್ವಾತ್ಮನೇ ಆಗಿರುವೆಯಲ್ಲ, ನಿನಗೆ ಇನ್ನೇನು ಬೇಕು ? ಇಲ್ಲದ್ದನ್ನು ಬಯಸುತ್ತಾ ತೊಳಲುವದು ಸರಿಯೆ ? ೧. ನೀನು ವಿಷಯವನ್ನು ಕಾಮಿಸುವ ಸ್ವರೂಪದವನಲ್ಲ, ಆಪ್ತಕಾಮನು. ೨. ಸೌಖ್ಯದೇಕತಾನ–ಆನಂದೈಕರಸ, ಏಕಿದನಿರುಕಿಸದಿಹೆ–ಇದನ್ನೇಕೆ ನೋಡದೆ ಇರುವೆ ? ೩. ಯೋಗಿಗೂ ಭೋಗಿಗೂ ತ್ಯಾಗಿಗೂ ಆತ್ಮನೇ ಆಗಿದ್ದೀಯೆ, ಇಲ್ಲದ ಕನವರಿಕೆಯನ್ನು ಬಿಡು. ೪. ದೇಹ, ಇಂದ್ರಿಯ, ವಿಷಯ, ಭೋಗ–ಇವೆಲ್ಲ ನಿನಗಿಂತ ಬೇರೆಯಲ್ಲ. ನಿನಗಿನ್ನೇನು ಬೇಕು ? ಈ ವಿಷಯವನ್ನು ನಿನ್ನೊಳಗೆ ನೀನೇ ತಿಳಿದುಕೊ. ೫. ಅನಂತಶ್ರೀಯುಕ್ತನು ನೀನು, ನಿನಗಿಂತ ಬೇರೊಂದಿದೆ ಎಂದು ಭಾವಿಸಬೇಡ. ಇದನ್ನು ತಿಳಿದಮೇಲೆ ನಿಶ್ಚಯವಾಗಿ ನೀನು ಶಂಕರನೇ ಆಗುವೆ, ]

## ಮುಕ್ತಿಗೆ ಸಾಧನ ಬೇಕಿಲ್ಲ

**ಮಾಯಾಮಾಳವಗೌಳ** **ಏಕತಾಳ**

ಮುಕ್ತಿಗೆ ಸಾಧನ ಬೇಕಿಲ್ಲ–ಜ್ಞಾನ ಸಾಕಲ್ಲ ।
ಯುಕ್ತಿಯೊಳಿದ ತಿಳಿಯಲು ಬಲ್ಲಾ–ತಗೆ ಬಂಧವಿಲ್ಲ ॥ಪ॥

ಕೈಲಾಸ ವೈಕುಂಠ ಮೊದಲಾದ–ಕರ್ಮಕೃತವಾದ । ದೇಶ ।
ಕಾಲಾಂತರದೆ ಪಡೆಯುವದಾದ–ಗತಿ ಬಹುಖೇದ । ನಿಜ.... ॥೧॥

ಇಲ್ಲದಿಹ ಮುಕ್ತಿ ಬರಲಾರದಲ್ಲ-ಬರೆ ನಿಲ್ಲದಲ್ಲ । ನಾ ।
ವೆಲ್ಲರು ಮುಕುತರು ಬಂಧವೆಲ್ಲ-ಮಿಥ್ಯವಲ್ಲದಿಲ್ಲ ॥೨॥

ಆತ್ಮಂಗೆ ಗುಣದೋಷಗಳಿಲ್ಲ-ನಿಷ್ಕಲನಲ್ಲ । ಪರ ।
ಮಾತ್ಮಂಗೆ ಸಂಸ್ಕಾರವು ಸಲ್ಲ-ಹೊಲ್ಲೆಹವಲ್ಲ ॥೩॥

ಆತ್ಮನು ಬ್ರಹ್ಮವಾಗುವದಿಲ್ಲ-ಆಗಲಹುದಿಲ್ಲ । ಎ ।
ಮ್ಮಾತ್ಮನೆ ಬ್ರಹ್ಮವೆಂದಿಹುದೆಲ್ಲಾ-ಶ್ರುತಿ ಸಟೆಯಲ್ಲ ॥೪॥

ಇಲ್ಲಿ ಈಗ ಮುಕುತರು ನಾವೆಲ್ಲ-ಬಂಧವೇ ಇಲ್ಲ ।
ವಲ್ಲಭ ಶಂಕರಗುರು ಬಲ್ಲ-ವೇದಸಾರವೆಲ್ಲ ॥೫॥

[೧. ಸತ್ತಮೇಲೆ ಬೇರೊಂದುಕಡೆಯಲ್ಲಿ ಬೇರೊಂದುಕಾಲದಲ್ಲಿ ಪಡೆದುಕೊಳ್ಳುವ ಗತಿಯು ಬಹಳ ಆಯಾಸದಿಂದ ಸಿಕ್ಕತಕ್ಕದ್ದು. ೨. ಮುಕ್ತಿಯು ಈಗಲೆ ನಮ್ಮೆಲ್ಲರ ರೂಪವಾಗಿಯೇ ಇದೆ. ಇಲ್ಲದಿದ್ದರೆ ಹೊಸದಾಗಿ ಬಂದೀತೆ ? ಬಂದರೆ ನಿತ್ಯವಾದೀತೆ ? ೩. ಸಂಸ್ಕಾರದಿಂದ ಆತ್ಮನನ್ನೂ ಪರಮಾತ್ಮನನ್ನೂ ಮಾಡಿಕೊಳ್ಳುವದು ಮುಕ್ತಿ ಎನ್ನಲಾಗದು. ಏಕೆಂದರೆ ಆತ್ಮನಲ್ಲಿ ಗುಣದೋಷಗಳೇ ಇಲ್ಲ. ಶುದ್ಧನಾದ ಪರಮಾತ್ಮನಿಗೆ ಸಂಸ್ಕಾರವೆಂಬುದು ಸಲ್ಲದು. ಏಕೆಂದರೆ ಅವನು ನಿರವಯವನು, ಇದು ಸುಳ್ಳಲ್ಲ. ೪. ಜೀವನು ಇನ್ನುಮೇಲೆ ಬ್ರಹ್ಮವಾಗುವದಿಲ್ಲ. ಈಗಲೆ ನಮ್ಮ ಆತ್ಮನ್ನು ಬ್ರಹ್ಮವಾಗಿರುತ್ತಾನೆಂದು ಎಲ್ಲಾ ಶ್ರುತಿಗಳೂ ಹೇಳುವವು, ಅದು ಸುಳ್ಳಲ್ಲ.]

## ಜಗದೆ ನಾನಿಲ್ಲ

**ಮಧ್ಯಮಾವತಿ** **ಝಂಪೆ**

ಜಗದೆ ನಾನಿಲ್ಲವೀ ಜಗವೆನ್ನೊಳಿಹುದು ॥ಪ॥

ಬಗೆಗಾಣಲಿದ ಭವದ । ಬಿಗಿಯು ಸಡಿಲಹುದು ॥ಅ॥

ಕನಸಿನಲಿ ನಿದ್ರಿಸಿದೆ ಕನವರಿಸುತ್ತೇಳುತೆ
ನೆನಲೆಲ್ಲವದು ನನ್ನ ಕನಸಲ್ಲವೆ ? ॥
ಇನಿಗಾಲ ನಿದ್ರೆಯನು ಕನಸನೆಚ್ಚರವ ತಾ
ನನು ಭವಿಸಲದುವು ಬರಿಗನಸಲ್ಲವೆ ? ॥೧॥

ಸನ್ನಿಹಿಡಿದಿರುವವಗೆ ತನ್ನೊಳಗೆ ತೋರ್ಪ ಫಲ ।
ಪಣ್ಣದಾ ನೋಟಗಳು ಭಿನ್ನವಿಹವೆ ? ॥
ಎನ್ನ ಮರಹಿಲಿ ತೋರುವುನ್ನತದ ಜಗವಿದೇ ।
ನೆನ್ನ ಬಿಟ್ಟರೆ ಗಳಿಗೆಯಿನ್ನಿರುವದೆ ? ॥೨॥

ದೇಶಕಾಲನಿಮಿತ್ತದಾಸರೆಯು ಕರ್ಮಫಲ ।
ಪ್ಪೋಸರಿಸುತಿಪ ಕರ್ತೃಭೋಕ್ತೃವರ್ಗ ॥
ಈಸು ಕಲ್ಪನೆಗಳಿಂ ಮಾಸದಿಪ ಶಂಕರಗೆ ।
ಮಿಾಸಲಾಗಿಪ ಮೈಮೆಗೀಶ ನಾನು ॥೩॥

[ನನ್ನೊಳಗೇ ಜಗತ್ತಿದೆ ಎಂಬುದನ್ನು ಮನಗಂಡರೆ ಸಂಸಾರದ ಬಿಕ್ಕಟ್ಟು ಸಡಿಲ ವಾಗುತ್ತದೆ. ೧. ಕನಸಿನಲ್ಲಿಯೇ ಮೂರು ಅವಸ್ಥೆಗಳನ್ನು ಕಾಣುವದುಂಟಷ್ಟೆ ? ಅದ್ದ ರಿಂದ ಇಷ್ಟುಕಾಲವೂ ಎಚ್ಚರ, ಕನಸು ನಿದ್ರೆ, ಇವುಗಳಾದವು ಎಂಬುದೆಲ್ಲವೂ ಬರಿಯ ಕನಸೇ. ಇನಿಗಾಲ–ಇಷ್ಟುಕಾಲ. ೨. ಪಲವಣ್ಣದ-ಬಗೆಬಗೆಯ. ಎನ್ನ ಮರಹಿಲಿ– ನನ್ನ ವಿಷಯವಾದ ಅಜ್ಞಾನದಲ್ಲಿ. ಸನ್ನಿಹಿಡಿದವನಿಗೆ ಕಾಣುವ ಬಗೆಬಗೆಯ ನೋಟ ಗಳು ಅವನಿಗಿಂತ ಭಿನ್ನವಲ್ಲ. ಆತ್ಮಾಜ್ಞಾನದಿಂದ ತೋರುವ ಈ ವಿಸ್ತಾರವಾದ ಜಗತ್ತು ಆತ್ಮನನ್ನು ಬಿಟ್ಟು ಅರೆಗಳಿಗೆಯೂ ಇರಲಾರದು. ೩. ಆಸರೆ-ಆಶ್ರಯವಾದ ಮನಸ್ಸು. ಓಸರಿಸುತಿಪ-ಒಂದು ಕಡೆಯಲ್ಲಿ ತೋರುವ. ಈಸು-ಇಷ್ಟು. ಮಿಾಸ ಲಾಗಿಪ-ಅವನಿಗೇ ಸಲ್ಲುವ. ದೇಶಕಾಲನಿಮಿತ್ತಗಳ ಆಶ್ರಯದಿಂದ ಒಂದು ಕಡೆಯಲ್ಲಿ ತೋರುವ ಕರ್ಮಫಲವೂ ಅನೇಕ ಕರ್ತೃಭೋಕ್ತೃಗಳೂ ಎಲ್ಲಾ ಕಲ್ಪನೆಯೇ. ಇದರಿಂದ ಆತ್ಮಸ್ವರೂಪಕ್ಕೆ ಯಾವ ಕಲಂಕವೂ ಇಲ್ಲ. ]

## ಇದು ಕೈವಲ್ಯಸುಖ

**ಶಂಕರಾಭರಣ** **ರೂಪಕ**

ಇದು ಕೈವಲ್ಯಸುಖ ॥ಪ॥

ಇದು ಕೈವಶವಾಗೆ ನಿತ್ಯಸುಖ ॥ಅ॥

ಕರ್ಮೋಪಾಸನೆಯೊಲ್ಲದ । ದುರ್ಮತತರ್ಕಕೆ ಸಲ್ಲದ ॥
ಮರ್ಮವಿಡಿದು ಗುರುಬೋಧೆಯು ।
ಪೆರ್ಮೆಯಿಂದ-ಲೊರ್ಮೊದಲೊಳೆ ಶರ್ಮವಿಡಿವು । ದಿದು ॥೧॥

ಮಿತಿಮಾತೃಮೇಯಮಾನ । ಗತಿಯ ಮೀರ್ದ ಸ್ವಯಂಭಾನ
"ನ ತು ತದ್ದ್ವಿತೀಯ"ವೆಂಬ ।
ಶ್ರುತಿಬೋಧಿತ–ಸ್ಥಿತಿಯಲಿ ಸುಸ್ಥಿತನಾಗಿಹು । ದಿದು ॥೨॥

ಸ್ಥಾನತ್ರಯದಲಿ ಕಾಣುವ । ಸ್ಥಾನಿಯ ಧರ್ಮವನೇನುವ ॥
ನಾನದೇನ್ನೊಳಿ ತಾನಿಪ ।
ಮೌನಿ ಶಂಕ–ರಾನುಮತಸ್ಥಾನದೊಳಿಪು । ದಿದು ॥೩॥

[೧. ಪೆರ್ಮೆ. ಹೆಚ್ಚಿಗೆ, ಒರ್ಮೊದಲೊಳೆ–ಮೊಟ್ಟಮೊದಲೆ, ಶರ್ಮ–ಸುಖ, ಕರ್ಮವಾಗಲಿ ಉಪಾಸನೆಯಾಗಲಿ ಬೇಡ, ತರ್ಕಕ್ಕೆ ನಿಲುಕದು. ಗುರುಬೋಧೆಯ ಮರ್ಮವನ್ನು ಹಿಡಿದರೆ ಮೊಟ್ಟಮೊದಲೆ ಸಿಕ್ಕುವ ಸುಖವೇ ಕೈವಲ್ಯಸುಖ. ೨, ಮಿತಿ–ಪ್ರಮಾಣದ ಫಲ, ಮಾತೃ-ಪ್ರಮಾಣವನ್ನು ಉಪಯೋಗಿಸುವವನು, ಮೇಯು ವಿಷಯ, ಮಾನ-ಪ್ರಮಾಣ, ಸ್ವಯಂಭಾವ-ತಾನೇ ಕಾಣುವ. ಪ್ರಮಾಣಪ್ರಮೇಯ-ಪ್ರಮಾತೃಪ್ರಮಿತಿ-ಇವುಗಳನ್ನು ಮೀರಿರುವ ಸ್ವಯಂಪ್ರಕಾಶವಾದ ಅದ್ವಿತೀಯನೇ ನಾನೆಂಬ ಶ್ರುತ್ಯುಕ್ತಸ್ಥಿತಿಯಲ್ಲಿರುವದೇ ಕೈವಲ್ಯಸುಖ. ೩. ಸ್ಥಾನತ್ರಯ-ಮೂರವಸ್ಥೆ. ಸ್ಥಾನಿ-ಅವಸ್ಥಾವಂತ, ಜೀವ ; ಏನುವನು-ಏನನ್ನೂ, ಅನುಮತ–ಒಪ್ಪಾದ. ಅವಸ್ಥಾತ್ರಯದಲ್ಲಿ ಕಾಣುವ ಅವಸ್ಥಾವಂತನ ಧರ್ಮವನ್ನು ಪಡೆಯದೆ ತನ್ನಲ್ಲಿ ತಾನಿದ್ದುಕೊಂಡಿರುವ ಶಂಕರಗುರುವಿಗೊಪ್ಪಾದ ಸ್ಥಾನದಲ್ಲಿರುವದೇ ಕೈವಲ್ಯಸುಖ.]

## ಏನೆಂದು ಬಣ್ಣಿಸಲಹುದು
### [ನಲಿದಾಡೆನ್ನ ನಾಲಗೆಯ ಮೇಲೆ]

**ಮುಖಾರಿ** **ಆದಿತಾಳ**

ಏನೆಂದು ಬಣ್ಣಿಸಲಹುದೀ ಸ್ಥಿತಿಯ । ಆನಂದವಿಭೂತಿಯ ॥ಪ॥

ಹೀನೋಚ್ಚಾದಿವಿಭೇದವನುಳಿಯುತೆ ।
ತಾನೇತಾನಾಗಿರುವುಪರತಿಯ । ನೇನೆಂದು ॥ಅ॥

ಆಕಾಶಾಂತವಡಗಿದಾ ಭೂತಗಳು ।
ತನ್ಮಾತ್ರೆಗಳಂತೆಯ । ನೇಕಾತ್ಮಕವಹ ಕರಣೋಪೇತಗಳು ।

ತತ್ಕ್ರಿಯೆಗಳೈದು ನಾ । ಲ್ಕಾಕಾರದ ಪ್ರಾಣಮನೋ ವೃತ್ತಿಗಳು ॥
ಈ ಕಾಯೇಂದ್ರಿಯದೋಕದೊಳಿರುತೆ । ಲ್ಲಾ ಕೆಲಸವ ತಾ ನೂಕುವ
ಜೀವನು । ಮೇಕಾತ್ಮನೊಳೆಲ್ಲಾ ಕಲೆತಿರುವದ । ನೇನೆಂದು ॥೧॥

ಇರವಿಲ್ಲಾಗಿಹ ಹದಿನಾರು ಕಲೆಗಳು । ಪ್ರಾಣಾದಿಗಳವು ಬರಿ ।
ಮರಹೆಂಬುವ ಮರುಜಲದೇರಿದಲೆಗಳು । ಕನಸಿನ ಬಲುವೈಸಿರಿ ।
ಯುರು ಕಾಮವು ಹರಡಿದ ಬೀಸುವಲೆಗಳು ॥
ಅರಿವಿನ ಪಿರಿನೇಸರು ತಾನುದಯಿಸೆ । ಸರಕನೆ ರೂಪುವೆಸರ
ತೊರೆಯುತೆ ಪರ।ಪುರುಷನಾಗಿಯೇ ದೊರೆವಡೆದಿರ್ಪುದ । ನೇನೆಂದು ॥೨॥

ಪುಣ್ಯಾಪುಣ್ಯಗಳನು ಸಲೆ ಮೀರಿರುವ । ತದ್ವಾಸನೆಯಿಂದೊಗೆ ।
ದನ್ಯಾದೃಶಕಾಮಕೆ ಬಲು ಚೇರಿರುವ । ಮರಹನು ತಾ ಮುಟ್ಟದ ।
ನನ್ಯಾತ್ಮತೆಯಿಂದಲೆ ಪರಮನೊಳಿರುವ ॥
ಸಂನ್ಯಸ್ತಾಖಿಲಭಿನ್ನಾಕೃತಿನಾ । ಮೋನ್ನತಸುಖ ಭಯಶೂನ್ಯತೆಯಲಿ ಸ ।
ಮ್ಮಾನ್ಯಶಂಕರನ ಧನ್ಯತೆವಡೆವುದ।ನೇನೆಂದು ॥೩॥

[ಹೀನೋಚ್ಚಾದಿವಿಭೇದವನು ಉಳಿಯುತೆ–ಕೀಳುಮೇಲು ಎಂಬ ಭೇದವನ್ನು ಬಿಟ್ಟು, ತಾನೇತಾನಾಗಿರುವ–ಅದ್ವಿತೀಯಾತ್ಮಸ್ಥಿತಿಯಲ್ಲಿರುವ. ಉಪರತಿ-ವಿಕಾರವೆಲ್ಲ ವನ್ನೂ ಬಿಟ್ಟಿರುವಿಕೆ. ೧. ಸ್ಥೂಲಪಂಚಭೂತಗಳು, ತನ್ಮಾತ್ರೆಗಳೆಂಬ ಸೂಕ್ಷ್ಮಭೂತ ಗಳು, ಕರಣೋಪೇತ–ಹತ್ತು ಇಂದ್ರಿಯಗಳಿಂದೊಡಗೂಡಿದವು, ತತ್ಕ್ರಿಯೆಗಳು-ಅವುಗಳ ಕೆಲಸವಾದ ಕೇಳುವದು, ನೋಡುವದು ಮುಂತಾದವು. ಐದು–ಪ್ರಾಣ, ಅಪಾನ ಮುಂತಾದ ಪ್ರಾಣವೃತ್ತಿಗಳು. ನಾಲ್ಕಾಕಾರ-ಅಂತಃಕರಣದ ಮನಸ್ಸು ಬುದ್ಧಿ, ಚಿತ್ತ, ಅಹಂಕಾರ ; ಈ ಕಾಯೇಂದ್ರಿಯದೋಕದೊಳು- ಈ ಶರೀರೇಂ ದ್ರಿಯಗಳ ಗುಂಪೆಂಬ ಸ್ಥಾನದಲ್ಲಿರುವ. ಈ ಎಲ್ಲವೂ ಏಕಾತ್ಮನಾದ ಪರಮಾತ್ಮನಲ್ಲಿ ಒಂದಾಗಿರುವದನ್ನು ಏನೆಂದು ಹೇಳಬೇಕು ? ೨. ಪ್ರಾಣಾದಿಗಳು, ಪ್ರಾಣ, ಶ್ರದ್ಧೆ, ಆಕಾಶಾದಿಗಳೈದು, ಇಂದ್ರಿಯ, ಮನಸ್ಸು, ಅನ್ನ, ವೀರ್ಯ, ತಪಸ್ಸು ಮಂತ್ರ, ಕರ್ಮ, ಲೋಕ, ನಾಮ. ಎಂಬ ಹದಿನಾರು ಕಲೆಗಳು. ಇವು ಅವಿದ್ಯೆಯೆಂಬ ಬಿಸಿಲು ಕುದುರೆಯ ನೀರಿನ ಹೆದ್ದೆರೆಗಳು ; ಕನಸಿನ ಬಲು ವೈಸಿರಿ -ಕನಸಿನಲ್ಲಿ ತೋರುವ ವಿಸ್ತಾರವಾದ ದೃಶ್ಯ. ಇವೆಲ್ಲವೂ ಜ್ಞಾನವೆಂಬ ಪ್ರಬೋಧಸೂರ್ಯನು ಉದಯಿ ಸುತ್ತಲೂ ನಾಮರೂಪಗಳನ್ನು ಬಿಟ್ಟು ಪರಮಾತ್ಮನಾಗಿಯೇ ಪ್ರಸಿದ್ಧವಾಗುವವು. ೩. ಅನ್ಯಾದೃಶ-ಅಸಮಾನವಾದ ; ಅನನ್ಯಾತ್ಮತೆ-ಐಕ್ಯ ; ಧರ್ಮಾಧರ್ಮಗಳನ್ನು

ಮೀರಿ, ಕಾಮಕ್ಕೆ ಬೇರೆಯಾಗಿ ಅವಿದ್ಯೆಯನ್ನು ಮುಟ್ಟದೆ, ಪರಮಾತ್ಮನಲ್ಲಿ ಒಂದಾಗಿ ಎಲ್ಲಾ ನಾಮರೂಪಗಳನ್ನೂ ಬಿಟ್ಟು ನಿರ್ಭಯವಾದ ಆನಂದದಲ್ಲಿ ಶಂಕರನೇ ಆಗುವ ಧನ್ಯತೆಯನ್ನು ಪಡೆಯುವದನ್ನು ಏನೆಂದು ಬಣ್ಣಿಸೋಣ. ?]

# ಮರೆವುದಾಗದು ಬ್ರಹ್ಮವ

**ದ್ವಿಜಾವಂತಿ** **ಆಟತಾಳ**

ಮರೆವುದಾಗದು ಬ್ರಹ್ಮವ । ನರಿಯೆ ಮತ್ತೆ । ॥ಪ॥

ಮರೆವುದಾಗದು ಮರಹರಿವಿಗೆ ಸಾಕ್ಷಿಯ । ಮರೆವನಾತುಮನಾಗಿರುವ ಕಾರಣದಿಂದ॥ಅ॥

ದೇಹವಾತುಮನೆಂಬುವ । ಜ್ಞಾನವು ತಾನು। ದೇಹದಿಂ ಪರನೆಂಬುವ ॥
ಊಹಿಸಿ ಶಾಸ್ತ್ರದಿಂ ತಿಳಿದರಿವಿಂದಲೇ ।
ಹೋಹ ತೆರದೆ ಶ್ರುತಿ ಸೋಽಹಂ ಬೋಧೆಯ ನೀಡೆ ॥೧॥

ಲೌಕಿಕಮಾನಂಗಳಿಂ । ಬಾಧಿಸಲಾತ್ಮ । ನೈಕನೆಂಬುವ ಕಂಗಳು ॥
ಏಕಭಾವದೆ ಕರಗಲೀ ಕನಸಿನ ತಿಳಿ । ವೇಕಾತ್ಮನ ಬೋಧೆಗೇಕಡ್ಡ ಬರುವುದು? ॥೨॥

ಮಾನವಸ್ತುವ ನೆಮ್ಮದ । ಜ್ಞಾನವು ವ । ಸ್ತ್ವಧೀನವಾಗಿಯೆ ಹೊಮ್ಮದ ॥
ಭಾನಕೆ ಬಾಧಕವೇನುವಿಲ್ಲವಾಗಿ । ತಾನೆ ಶಂಕರನೆಂದು ಕಾಣಲೊಮ್ಮೆ ಮತ್ತೆ ॥೩॥

[ಮರೆವನಾತುಮ-ಮರೆಯುವವನಿಗೂ ಆತ್ಮ, ಬ್ರಹ್ಮವನ್ನು ಅರಿತರೆ ಮತ್ತೆ ಅದನ್ನು ಮರೆಯಲಾಗುವದಿಲ್ಲ. ಏಕೆಂದರೆ ಅದು ಮರಹು, ಅರಿವು, ಎರಡಕ್ಕೂ ಸಾಕ್ಷಿಯಾಗಿ ಮರೆಯುವವನ ಆತ್ಮನೇ ಆಗಿರುತ್ತದೆ. ೧. ಊಹಿಸಿ-ಅನುಮಾನ ಪ್ರಮಾಣದಿಂದ, ಸೋಽಹಂಬೋಧೆ-ನಾನೇ ಬ್ರಹ್ಮವೆಂಬ ಅರಿವು. ದೇಹವೇ ನಾನು ಎಂಬ ಅರಿವು "ದೇಹಾತಿರಿಕ್ತನು ನಾನು, ದೇಹಕ್ಕಿಂತಲೂ ಬೇರೆ" ಎಂಬ ಶಾಸ್ತ್ರ ಜ್ಞಾನದಿಂದ ಊಹಿಸಿ ತಿಳಿದ ಜ್ಞಾನದಿಂದ ಹೋಗುವಂತೆ "ಅವನೇ ನಾನು" ಎಂಬ ಜ್ಞಾನವನ್ನು ಶ್ರುತಿಯು ಕೊಡಲು ಬ್ರಹ್ಮವನ್ನು ಮತ್ತೆ ಮರೆಯುವದಕ್ಕೆ ಆಗ ಲಾರದು; ೨. ಲೌಕಿಕಮಾನಂಗಳು– ಪ್ರತ್ಯಕ್ಷವೇ ಮುಂತಾದ ಪ್ರಮಾಣಗಳು ನೈಕನೆಂಬುವ-ಆತ್ಮನು ಅನೇಕವೆಂಬ. ಕನಸಿನ ತಿಳಿವು–ಸುಳ್ಳುಬುದ್ಧಿ, ಪ್ರತ್ಯಕ್ಷವೇ ಮುಂತಾದ ಲೌಕಿಕಪ್ರಮಾಣಗಳು ಬಾಧಿತವಾಗಲು, ಆತ್ಮನು ಅನೇಕರೆಂಬ ದೃಷ್ಟಿಗಳು ಐಕ್ಯದಿಂದ ಕರಗಿಹೋಗಲಾಗಿ, ಸ್ವಪ್ನಜ್ಞಾನದಂಥ ಈ ನಮ್ಮ ತಿಳಿವಳಿಕೆಯು ಆತ್ಮನು ಒಬ್ಬನೇ ಎಂಬ ಅರಿವಿಗೆ ಏತಕ್ಕೆ ಅಡ್ಡಿಯಾಗುವದು ? ೩. ವಸ್ತ್ವಧೀನ-ಬ್ರಹ್ಮವೆಂಬ

ಸತ್ಯವಸ್ತುವಿರುವ ರೀತಿಯಲ್ಲಿ, ಹೊಮ್ಮಿದ–ಉಂಟಾದ ; ಭಾನ-ಬ್ರಹ್ಮಪ್ರಕಾಶ ಪ್ರಮಾಣವನ್ನೂ ಅದರ ಜ್ಞೇಯವಾದ ವಸ್ತುವನ್ನೂ ಅವಲಂಬಿಸಿರುವ ಜ್ಞಾನವು ವಸ್ತುತಂತ್ರವಾಗಿಯೇ ಚಿಗುರಲು, ಅರಿವಿಗೆ ಬಾಧಕವೇ ಇಲ್ಲದಿರುವದರಿಂದ ತಾನೇ ಪರಮಾತ್ಮನು ಎಂದು ಕಂಡುಕೊಂಡರೆ ಅದನ್ನು ಮರೆಯುವದಾಗಲಾರದು.]

# ಧನ್ಯ ನಾನಾದೆನು

[ಎಚ್ಚರಿಕೆ ಭಾಗ್ಯ]

**ಸೌರಾಷ್ಟ್ರ** **ಆಟತಾಳ**

ಧನ್ಯ ನಾನಾದೆನು ಕೃತಕೃತ್ಯನಾದೆನು, ಇನ್ನೇನಿನ್ನೇನು ? ॥ಪ॥

ಮಾನ್ಯನು ಮಾನಿತವಂದ್ಯ ನಾನಾದೆನು, ಇನ್ನೇನಿನ್ನೇನು ? ॥ಅ॥

ಸದಯಸದ್ಗುರುಕೃಪಾಸುಧೆಯೊಳು ಮುಳುಗಿದೆ । ನಿನ್ನೇ ॥
ಹೃದಯದ ಗಂಟುಗಳಿದೆ ಬಿಚ್ಚಿಕಳೆದಿದೆ । ಇನ್ನೇ ॥೧॥

ಪಾಪಪುಣ್ಯಗಳೆಂಬ ಪಾಶವು ಹರಿಯಿತು । ಇನ್ನೇ ॥
ತಾಪತ್ರಯವೆಂಬ ತ್ರಾಸವು ತೀರಿತು ಇನ್ನೇ ॥೨॥

ಸರ್ವಸಂಶಯಗಳು ಸರಿದವು ಕೆಲಕೀಗ । ಳಿನ್ನೇ ॥
ಶರ್ವಶಂಕರದೇವದರುಶನದೊಲವಾಗ । ಲಿನ್ನೇ ॥೩॥

[ಮಾನಿತವಂದ್ಯ-ಗೌರವವುಳ್ಳವರಿಗೂ ನಮಸ್ಕಾರಾರ್ಹನು, ಹೃದಯದ ಗಂಟುಗಳು–ತೊಡಕಾಗಿರುವ ಕಾಮಗಳು, ತಾಪತ್ರಯ–ಅಧ್ಯಾತ್ಮಿಕ, ಆಧಿಭೌತಿಕ, ಅಧಿದೈವಿಕ-ಎಂದು ಮೂರು ಬಗೆಯಾಗಿರುವ ತಾಪ; ಕೆಲಕೆ-ಒಂದು ಕಡೆಗೆ.]

# ಸತ್ಯವೆ ಗೆದ್ದಿತು

**ಮುಖಾರಿ** **ಆಟತಾಳ**

ಸತ್ಯವೆ ಗೆದ್ದಿತು ಸಟೆ ಸತ್ತುಹೋಯಿತು ಹೊಡೆಯಿರೊ ಡಂಗುರವ ॥ಪ॥

ಮಿಥ್ಯಾದುರ್ಗದ ಕೋಂಟೆಕೊತ್ತಳ ಮುರಿಯಿತು ಹೊಡೆಯಿರೊ ಡಂಗುರವ ॥ಅ॥

ಸತ್ಯವು ಧರ್ಮವು ಸೈನಿಕರಿಹರೆಂದು । ಹೊಡೆಯಿರೊ ।
ನಿತ್ಯಬ್ರಹ್ಮಚರ್ಯನಿಗಮ ನಮ್ಮವು ಎಂದು ಹೊಡೆಯಿರೊ ॥೧॥

ದೂರದ ರಾಜ್ಯ ನಮ್ಮೆದುರಿಗೆ ಬಂತೆಂದು ಹೊಡೆಯಿರೊ ।
ನೇರವಾಗಿ ಲಗ್ಗೆಯೇರಿ ಕೈವಶವೆಂದು ಹೊಡೆಯಿರೊ ॥೨॥

ಪ್ರಣವದ ಬಿಲ್ಲಿನೊಳಾತ್ಮಶರವ ಹೂಡಿ । ಹೊಡೆಯಿರೊ ।
ದಣಿವಿಲ್ಲದೆಚ್ಚು ದೂಡಿದೆವು ದೋಷವನೆಂದು । ಹೊಡೆಯಿರೊ ॥೩॥

ದೇವಯಾನದ ದೂರಧಾಳಿಯಿನ್ನೇಕೆಂದು । ಹೊಡೆಯಿರೊ
ಸಾವಿಲ್ಲದ ಸುಖ ಸೂರೆಯಾಯಿತು ಎಂದು । ಹೊಡೆಯಿರೊ ॥೪॥

ಪಂಚಕೋಶದ ಒಳಸಂಚು ಮುರಿಯಿತೆಂದು । ಹೊಡೆಯಿರೊ ।
ಮುಂಚಿನ ಸ್ವಾರಾಜ್ಯ ಹೊಂಚಿ ಪಡೆದೆವೆಂದು । ಹೊಡೆಯಿರೊ ॥೫॥

ಏಕತ್ವರಾಜ್ಯ ಸುಖೈಕತಾನವೆಂದು । ಹೊಡೆಯಿರೊ ।
ಶೋಕಮೋಹಗಳಿಗಿನ್ನೇಕಂಜುವಿರೆಂದು । ಹೊಡೆಯಿರೊ ॥೬॥

ಸುಂಕಸುಲಿಗೆಗಳ ಸೋಂಕಿಲ್ಲವಿಲ್ಲೆಂದು । ಹೊಡೆಯಿರೊ ।
ಶಂಕರರಾಜ್ಯ ಶಿವಂಕರ ಪ್ರಜೆಗೆಂದು । ಹೊಡೆಯಿರೊ ॥೭॥

[ಕೊತ್ತಳ–ಬುರುಜು, ಲಗ್ಗೆಯೇರು–ಹಲ್ಲೆಹತ್ತು, ಶಿವಂಕರ-ಮಂಗಲವನ್ನು ಮಾಡುವದು]

## ಎಲ್ಲವು ಬ್ರಹ್ಮವಿದು

**ಶಂಕರಾಭರಣ** **ಆದಿತಾಳ**

ಎಲ್ಲವು ಬ್ರಹ್ಮವಿದು । ಆರಯ್ದು ನೋಡ । ಲೆಲ್ಲವು ॥ಪ॥
ಎಲ್ಲವು ಬ್ರಹ್ಮವಿನ್ನಿಲ್ಲ ಬೇರೆಂಬುವ ।

ಸಲ್ಪ ವೇದಾಂತದ ಸೊಲ್ಲನರಿತು ನೋಡ । ಲೆಲ್ಲವು ॥ಅ॥

ಎಡಗಡೆ ಬ್ರಹ್ಮವು ಬಲಗಡೆ ಬ್ರಹ್ಮವು ।
ಪಡಗಡೆ ಮುಂಗಡೆಯೆಲ್ಲ ಬ್ರಹ್ಮ ॥
ಅಡಿಯೊಳಗಂತೆ ಮೇಗಡೆಯೊಳು ಹೊರಗಿನ ।
ಕಡೆಯೊಳಗೆಲ್ಲವು ಕಡಿವಡೆಯದ ಬ್ರಹ್ಮ ।ವೆಲ್ಲವು ॥೧॥

ಅಂದಿಗಿಂದಿಗೂ ಬ್ರಹ್ಮ ಮುಂದಕೂ ಬ್ರಹ್ಮವು ।
ಎಂದೆಂದಿಗೂ ಇಹುದೊಂದೆ ಬ್ರಹ್ಮ ॥
ಅಂದಿಂದೆಂಬುದರಂದವ ಮೀರಿದಾ ।
ನಂದದ ಸಿಂಧುವ ಜೀವದ ಪರಬ್ರಹ್ಮ ॥೨॥

ನಾಮವು ಬ್ರಹ್ಮವು ರೂಪವು ಬ್ರಹ್ಮವು ।
ನೇಮದ ಕರ್ಮ, ಕಾರಕ, ಫಲಬ್ರಹ್ಮ ॥
ನಾಮರೂಪದ ಕರ್ಮಸೀಮೆಯ ಮೀರಿರು।
ಆ ಮಹಾನಂದದಧಾಮ ಶಂಕರ ಬ್ರಹ್ಮ ॥೩॥

[ಅರಯ್ದು—ಆಲೋಚಿಸಿ, ೧. ಮೇಗಡೆ-ಮೇಲುಗಡೆ, ಕಡಿವಡೆಯದ-ಸ್ವಲ್ಪವೂ ಬಿಡುವಿಲ್ಲದ. ೨. ಅಂದಿಂದೆಂಬುದರಂದವ ಮೀರಿದ ಆನಂದ-ಕಾಲದ ಅಳತೆಯನ್ನು ಮೀರಿರುವ ಆನಂದ. ೩. ಸೀಮೆ-ಗಡಿ.]

# ನಾನೇ ಬ್ರಹ್ಮವು ಬೇರಲ್ಲ

**ಮೋಹನ** **ಆದಿತಾಳ**

ನಾನೇ ಬ್ರಹ್ಮವು ಬೇರಲ್ಲ ॥ಪ॥

ನಾನಲ್ಲದೆ ಪರತೋರುವುದೆ । ಇದೋ । ನಾನೇ ನಾನಾಗಿಹೆನಲ್ಲ ॥ಅ॥

ಸೂರಿಯ ಚಂದಿರರೊಳಗೆಲ್ಲ । ಮಿಂಚ । ಬೇರೆ ಬಿಡದೆ ಬೆಳಗುವೆನಲ್ಲ॥
ತಾರಗೆಮಿಂಚಲಿ ತೋರುತ ಬೆಂಕಿಗೆ । ಮೀರಿದ ಸೊಬಗನು ಸೂಡಿಪೆನಲ್ಲ ॥೧॥

ಹೂಹಣ್ಣುಗಳಲಿ ತೆರಪಿಲ್ಲ । ಗಿಡ । ರೂಪು ಸವಿಯು ವಾಸನೆಯೆಲ್ಲ ॥
ಜೋಡಿಪೆನ್ನಯ ಮಹಾತ್ಮ್ಯವು ಕಿವಿ । ಗಾಡ ಸೊಗದಸಿರಿಗಾನವದೆಲ್ಲ ॥೨॥

ಬೆಟ್ಟವು ನದಿ ಮುನ್ನೀರೆಲ್ಲ । ನಾ । ತೊಟ್ಟ ತೊಡಿಗೆಯಿದು ಹುಸಿಯಲ್ಲ ॥
ದಟ್ಟಡವಿಯು ಬಲು ಬಟ್ಟಬಯಲು ಪುರ । ಪಟ್ಟಣಗಳು ಎನ್ನಿಷ್ಟವಿದೆಲ್ಲ ॥೩॥

ನರನಾರೀಜನರೂಪೆಲ್ಲ । ನಾ ।ಧರಿಸಿದ ಮಾಯೆಯು ಮತ್ತಿಲ್ಲ ॥
ಚರಜಂಗಮಜೀವರುಗಳ ಕಲ್ಪಿಸಿ । ಮೆರೆಯಿಪ ನಾಟಕವಿದು ಸಟೆಯಲ್ಲ ॥೪॥

ಎಚ್ಚರುಕನಸುನಿದ್ರೆಗಳೆಲ್ಲ । ಜನ । ರಿಚ್ಛೆಯು ಕಲ್ಪನೆಯಲ್ಲದಿಲ್ಲ ।
ನಿಚ್ಚವು ಮಾರ್ಪಡದಚ್ಚರೂಪಿನಲಿ । ಸಚ್ಚಿತ್ಸುಖಿ ಶಂಕರನಿಹೆನಲ್ಲ ॥೫॥

[೧, ಸೂಡನು-ಶಾಖವನ್ನು, ಸೂಡಿಪೆನು-ಮುಡಿಸುತ್ತೇನೆ, ಉಂಟುಮಾಡುವೆನು ; ೨. ತೆರವಿಲ್ಲಾಗಿ-ಸ್ವಲ್ಪವೂ ಬಿಡದೆ ತುಂಬಿ, ರೂಹು-ಆಕಾರ, ಬಣ್ಣ ; ಜೋಹ-ವೇಷ, ಆಕಾರ ; ಕಿವಿಗಾಹಸೊಗದಸಿರಿಗಾನ-ಕಿವಿಗೆ ಆಗುವ ಸುಖದಗಾನವೂ ನನ್ನ ಮಹಿಮೆಯೇ ; ೩. ಮುನ್ನೀರು-ಸಮುದ್ರ.]

## ಎನ್ನೈಸಿರಿಯಿದನಂತ

**ನಾದನಾಮಕ್ರಿಯೆ** **ಆದಿತಾಳ**

ಎನ್ನೈಸಿರಿಯಿದನಂತ ! ಭಲೆ । ಇನ್ನೇನಿಹುದಿದಕಿಂತ ॥ಪ॥

ಚನ್ನೆಸೆವೆಲ್ಲಾ ನಾಮರೂಪಕ । ವರ್ೋನ್ನತ ಜಗವನು ಮೀರಿರುವಂಥ ॥ಅ॥

ಕಾಲಾಕಾಶದೊಳಾನು । ಮೇಣ್ । ಕಾಲಾಕಾಶಗಳಾನು ।
ಕಾಲಾಕಾಶವ ಮೀರುತಲೆನ್ನಯ । ಮೇಲುಮೆಯೊಳಗಿಹೆ ನಾನು ॥ ॥೧॥

ಪಂಚಭೂತದೊಳು ನಾನು । ಮೇಣ್ । ಪಂಚಭೂತಗಳು ನಾನು ॥
ಪಂಚಪ್ರಾಣೇಂದ್ರಿಯತತ್ಕ್ರಿಯೆ ಮನ । ದಂಚ ಮೀರಿರುವೆ ನಾನು ॥೨॥

ಸುರನರದೈತ್ಯರೊಳಾನು । ಮೇಣ್ । ಸುರನರದೈತ್ಯರು ನಾನು ।
ಸುರನರದೈತ್ಯರ ಭೇದವಿಲ್ಲದಾ । ಪರತರಶಂಕರ ನಾನು ॥೩॥

[ಐಸಿರಿ-ಐಶ್ವರ್ಯ, ಚನ್ನೆಸೆವ-ಚನ್ನಾಗಿ ಹೊಳೆಯುವ, ೧, ಮೇಣ್-ಮತ್ತು ಮೇಲುಮೆ-ಮಹಿಮೆ. ೨, ಅಂಚ-ಎಲ್ಲೆಕಟ್ಟನ್ನು. ೩. ಶಂಕರ-ಸರ್ವಶ್ರೇಷ್ಠನಾದ ಪರಮಾತ್ಮ.]

## ನಿನ್ನೊಳಗೆ ನೀನಿದ್ದು

**ಧನಾಸರಿ** **ಝಂಪೆ**

ನಿನ್ನೊಳಗೆ ನೀನಿದ್ದು ಸುಖವ ಪಡೆ ಎಲೆ ಮನುಜ ।
ಅನ್ಯರಲಿ ನಿನ್ನ ಸುಖವಿಹುದುಂಟೆ ಮರುಳೆ ? ॥ಪ॥

ತಾವೆ ಸೌಖ್ಯದ ನೆಲೆಯ ತಾವನರಿಯದ ಮಡೆಯ
ರೀವರೆಂತ್ಯಿ ಹೆರರಿಗಾ ಸೌಖ್ಯವ ?
ಸಾವಿನಾ ಸುಳಿಯೊಳಗೆ ಸಿಲುಕಿ ನರಳುತಲಿರುವ
ಜೀವರನು ಜೀಯೆಂಬುದೇತಕ್ಕೆಯ್ಯ ? ॥೧॥

ಹೆಂಡಿರಲಿ ಮಕ್ಕಳಲಿ ಹೊಲದಿ ಹಣದೊಳಗಿಂತು
ಕಂಡ ವಿಷಯುಗಳಲ್ಲಿ ಕೌತುಕದಲಿ ॥
ಹಿಂಡಿಕೊಳ್ಳುವೆನಿಲ್ಲಿ ಸುಖವನೆಂಬೀ ನಿನ್ನ
ಭಂಡತನದಾಸೆಯನು ಬಿಡಲಾರೆಯು ? ॥೨॥

ಶರಿರದಲಿ ಹರಣದಲಿ ಮನದಲಿಂದ್ರಿಯುಗಳ
ಲ್ಲರಸಿ ಬಳಲದಿರಿನ್ನು ನಿಜಸೌಖ್ಯವ॥
ಇರುವೆ ನಿತ್ಯಾನಂದಘನಶಂಕರನೆ ಆಗಿ
ತಿರುಕನಂದದೊಳಾರ ಬೇಡಿಕೊಂಬೆ ? ॥೩॥

[೧, ಮಡೆಯುರು-ಮೂಢರು. ೩. ಹರಣದಲಿ-ಪ್ರಾಣದಲ್ಲಿ]

## ಬೆಳಕನರಸುತಲಿಪ್ಪ

**ಮಧ್ಯಮಾವತಿ** **ಝಂಪೆ**

ಬೆಳಕನರಸುತಲಿಪ್ಪ ತಿಳಿಗೇಡಿಮಾನವನೆ
ತಿಳಿಯೆ ನೀ ಸಮನಲ್ತೆ ಮುದಿಗೂಗೆಗೆ ॥ಪ॥

ಸೂರಿಯನ ಬೆಳಕಿನಲಿ ಕಾರಿಯಂಗಳ ಪೂಳ್ಪೆ
ಕಾಣುತಿಹೆ ಜಗವನಾ ಬೆಳಕಿನಲ್ಲಿ ॥
ಸೂರಿಯನ ಬೆಳಕನೇ ಮರೆದಿಪ್ಪ ಮುದಿಗೋಷ್ಠಿ
ಯಾರಿನ್ನು ಸರಿ ನಿನಗೆ ಮರೆಪೆಯಲ್ಲಿ ? ॥೧॥

ಚಂದಿರನ ಚೆನ್ನದಿಂದೊಂದೊಂದು ವಸ್ತುವನು
ಚಂದಿರನು ಮುಳುಗಿದೊಡೆ ದೀಪದಿಂದ ।
ಚಂದದಲಿ ಕಾಣುತ್ತಲಂದಿಗಿಂದಿಗು ಬೆಳಕಿ
ನಂದವನೆ ಮರೆತೆಯದಕೇನು ಕುಂದೆ ? ॥೨॥

ಕಣ್ಣಿನಿಂ ಬೆಳಗುತ್ತ ಬಣ್ಣಿಸುವೆ ಸೂರ್ಯೇಂದು
ವಹ್ನಿಗಳ ಮರೆತೆಯಾ ಕಣ್ಣನಿಂತು ॥
ಕಣ್ಣಿಗೆಲ್ಲವ ತೋರ್ಪ ಬಿನ್ನಣವ ನೀಡುತಾ
ಕಣ್ಣ ಬೆಳಗುವ ಮನವನರಿವೆಯೆಂತು ? ॥೩॥

ಕ್ಷಣಕೊಂದು ಮೊನೆಯುತಿಹ ಮನದ ವೃತ್ತಿಯನೆಲ್ಲ
ದಣಿವಿಲ್ಲದೊಮ್ಮೆಗೇ ಬೆಳಗುತಿರುವೆ ॥
ಚಿನುಮಯ ಪರಂಜ್ಯೋತಿಯೆನಿಸಿರ್ದು ಕುರುಡನಂ ।
ತಿನಿತು ನಿನ್ನನೆ ನೀನು ತಡಕುತಿರುವೆ ॥೪॥

ಸರುವಭೂತನಿವಾಸ ಸರ್ವಕರಣಕೆ ಭಾಸ
ಸರ್ವಗತ ನಿತ್ಯ ನೀ ಸ್ವಪ್ರಕಾಶ ॥
ಸರ್ವಶಂಕರ ನಿನಗೆ ಪರ್ವಿದಾ ತಮವುಂಟೆ ?
ಓರ್ವ ನೀನದ್ವಯಜ್ಯೋತಿವೇಷ ॥೫॥

[೧-೨. ಸೂರ್ಯಚಂದ್ರರ ಬೆಳಕಿನಲ್ಲಿ ವ್ಯವಹರಿಸುತ್ತಲೇ ಇದ್ದು ಅವರಿರುವ ರೆಂಬುದನ್ನು ಮರೆಯುವವರಂತೆ ಆತ್ಮನ ಬೆಳಕಿನಲ್ಲಿಯೇ ವ್ಯವಹರಿಸುತ್ತಾ ಜನರು ಆತ್ಮನನ್ನರಿತುಕೊಳ್ಳಲಾರದೆ ಇರುತ್ತಾರೆ. ೩. ಕಣ್ಣಿನಿಂದಲೇ ಬೆಳಕನ್ನು ನೋಡುತ್ತಿರುವೆವು. ಇದು ಕಣ್ಣಿನ ನೆರವಿನಿಂದಾದದ್ದು ಎಂಬುದನ್ನು ಲಕ್ಷ್ಯದಲ್ಲಿಡುವದಿಲ್ಲ. ಕಣ್ಣನ್ನೂ ಮನಸ್ಸಿನಿಂದ ಅರಿಯುತ್ತಿರುವೆವು-ಎಂಬುದು ನಮಗೆ ಹೇಗೆ ಮನದಟ್ಟಾದೀತು ? ೪. ವೃತ್ತಿಗಳು ಒಂದೊಂದು ವಿಷಯಕ್ಕೆ ಒಂದೊಂದಾಗುತ್ತಿರುವವು : ಎಲ್ಲಾ

ವೃತ್ತಿಗಳನ್ನೂ ತಾನು ಇದ್ದಂತೆಯೇ ಇದ್ದು ಬೆಳಗುತ್ತಿರುವ ಚಿನ್ಮಯವೇ ನಮ್ಮ ಆತ್ಮ ಅವನು ಎಲ್ಲಿದ್ದಾನೆಂದು ಹುಡುಕುವದು ನಗೆಗೇಡು. ೫. ಎಲ್ಲ ಪ್ರಾಣಿಗಳಲ್ಲಿಯೂ ಇರುವವನೂ, ಇಂದ್ರಿಯಗಳನ್ನೆಲ್ಲ ಬೆಳಗುತ್ತಿರುವವನೂ ಸರ್ವವ್ಯಾಪಕನೂ ಆಗಿರುವ ಆತ್ಮನು ತಾನೇ ಬೆಳಗುತ್ತಿದ್ದಾನೆ. ಅವನನ್ನು ಮುಚ್ಚಿರುವ ಅಜ್ಞಾನವೇ ಇಲ್ಲ. ಆ ಅದ್ವಿತೀಯಚಿನ್ಮಾತ್ರವೇ ನಮ್ಮ ಸ್ವರೂಪ.]

# ನಾನೆಂಬುದ ತಿಳಿಯಣ್ಣ

**ಮಾಯಾಮಾಳವಗೌಳ** **ಆದಿತಾಳ**

ನಾನೆಂಬುದ ತಿಳಿಯಣ್ಣ । ಇದ।ನೇನೆಂದು ತಿಳಿದರೆ ನೀನೆ ಮುಕ್ಕಣ್ಣ ॥ಪ॥

ನಾನು ನೀನಿವರೆಂಬ ಹೀನಮತಿಯ ಭೇದ।ವೇನುಮಿಲ್ಲದ ಬರಿ ನಾನೇ ನೀನಣ್ಣ ॥ಅ॥

ಬೆಳೆದೆ ಬಡಕಲಾದೆನೆಂಬ । ನನ್ನ ಚಲುವು ಮಾಸಿತು ಮುಖ ಕರೆಯಾಯಿತೆಂಬ ॥
ಬಲಕುಂದಿಹೋಯಿತು ಎಂಬ । ಘಳಿಘಳಿಗೆಗೆ ಬೇನೆಯು ಬಳಿಸಾರ್ವುದೆಂಬ ॥
ನಿಲುವೆ ನಡೆವೆ ಹಾರಿಕೊಳುವೆ ಪರೆಯುವೆಲ್ಲ । ಕಳೆದು ಮುಪ್ಪಡಿಸಿತು ಬಳಿಕಿನ್ನೇನೆಂಬ॥೧॥

ಎಳೆಗಣ್ಣು ಮಾಯವಾಯ್ತೆಂಬ । ಕಿವಿ।ಗುಲಿಯು ಕೇಳದುಬಂತು ಧೊರೆಕಿವುಡೆಂಬ ॥
ಪುಳಿಸಿಹಿ ತೋರದಿನ್ನೆಂಬ ।ಚರ್ಮ । ತಿಳಿಯದು ಮೆಲ್ಲಿತು ತರಕಲನೆಂಬ ॥
ಬಲುನೆಗಡಿಯು ಕಂಪುಸುಳಿಯದು ಮೂಗಿಗೆ ಹೆಳವ ಮೋಟನು ಮೂಗ
ಬಲುಷಂಡನೆಂದೆಂಬ ॥೨॥

ಆಸೆಯು ತೀರಲಿಲ್ಲೆಂಬ । ಬಲು।ಮೋಸಹೋದೆನಯ್ಯೋ ಕೆಟ್ಟೆನೆಂದೆಂಬ ।
ಮಾಸಿತು ನೆನಪೆನಗೆಂಬ । ತೀರ । ಘಾಸಿಯಾಯಿತು ಮನದರಿವೆಲ್ಲವೆಂಬ ।
ಈಸು ದಿನವು ಕರ್ಮೋಪಾಸನೆಗೈದುದ।ರಾಸಾಕ್ಷಿ ನೀ ಶಂಕರಾಸಲಹೆಂದೆಂಬ ॥೩॥

[ಶರೀರ, ಇಂದ್ರಿಯ, ಮನಸ್ಸು-ಇವುಗಳ ಧರ್ಮವನ್ನು ಯಾವದರಲ್ಲಿ ಹುಟ್ಟು ಹಾಕಿಕೊಂಡಿರುವೆವೋ ಅದು ನಿಜವಾಗಿ ಆತ್ಮ ; ಅದೇ "ನಾನು ! ನಾನು!" ಎಂದು ಕರೆದುಕೊಳ್ಳುತ್ತಿರುವ ಪರಮಾರ್ಥ, ಅವನು ಇದೆಲ್ಲಕ್ಕೂ ಸಾಕ್ಷಿ–ಎಂಬುದು ಪದದ ಸಾರ. ೧. ಬಳಿಸಾರ್ವುದು–ಹತ್ತಿರ ಬರುತ್ತದೆ, ೨. ಉಲಿಯು-ಸದ್ದು, ಮೆಲ್ಲಿತು –ಮೃದು. ೩. ಮನಸ್ಸಿನ ಕಾಮ, ಸ್ಮೃತಿ, ಜ್ಞಾನ-ಮುಂತಾದ ವೃತ್ತಿಗಳನ್ನು ಅರಿಯುವದೇ ನಾನು ಎಂಬ ನಿಜವಾದ ಆತ್ಮ.]

# ನೋಡುತಲಿರುವೆನು ನಾನೆಲ್ಲ

**ನಾದನಾಮಕ್ರಿಯೆ** **ಆದಿತಾಳ**

ನೋಡುತಲಿರುವೆನು ನಾನೆಲ್ಲ । ನೆರೆ । ನೋಡಲು ನಾನಲ್ಲದೇನಿಲ್ಲ ॥
ನೋಡುವ ನನ್ನೊಳು ಮೂಡಿಮುಳುಗಿ ತೇ । ಲಾಡುತಲಿರುವದು ಜಗವೆಲ್ಲ ॥ಅ॥

ಮನಸುಕರಣದೇಹವಿದೆಲ್ಲ । ಎನ್ನ । ಕನಸಲ್ಲದೆ ಬೇರಿನಿಲ್ಲ ।
ಮನಸು ಮಾತುಗಳ ಮೀರಿರುವೆನ್ನಯ । ಘನತೆಗೆ ಕುಂದುಕೊರತೆಯಿಲ್ಲ ॥೧॥

ನಿದ್ರೆಕನಸು ಎಚ್ಚರವೆಲ್ಲ । ಚಿನ್ಮುದ್ರಿತವಾಗಿಯೆ ಇಹುದಲ್ಲ ।
ಇದ್ದಂತಿಹ ಪರಿಶುದ್ಧದರಿವನಿದ । ಹೊದ್ದದ ವಸ್ತುವೆ ತಾನಿಲ್ಲ ॥೨॥

ಕಾರಿಯಕಾರಣ ಜಗವೆಲ್ಲ । ಸಂಸಾರವಿದನು ಬಿಟ್ಟೇನಿಲ್ಲ ।
ಕಾರಿಯಕಾರಣಸಾಕ್ಷಿಯೆನಗೆ । ಇದ । ರೇರಿಳಿತದ ಸೋಂಕೇನಿಲ್ಲ ॥೩॥

ಅರಿವನರಿವ ಪೆರತರಿವಿಲ್ಲ । ಈ । ಅರಿವ ನಾನು ಮರೆಯುಲು ಸಲ್ಲ ।
ಅರಿಯುವ ಕರೆಕರೆಯಿಲ್ಲದಿರುವ । ಬರಿಯರಿವು ಶಂಕರನು ಬೇರಲ್ಲ ॥೪॥

[ಮೂಡಿ ಮುಳುಗಿ ತೇಲಾಡುತ್ತಿರುವುದು-ಸೃಷ್ಟಿಸ್ಥಿತಿಲಯಗಳನ್ನು ಹೊಂದುವದು. ೨. ಚಿನ್ಮುದ್ರಿತ-ಚಿದಾಭಾಸ, ಹೊದ್ದದ-ಆಶ್ರಯಿಸದ, ೪. ಪೆರತರಿವು-ಮತ್ತೊಂದು ಜ್ಞಾನ, ತತ್ತ್ವಪ್ರಧಾನವಾದದ್ದು.]

# ನಾರಾಯಣ ನರನಲ್ಲ

**ತೋಡಿ**

ನಾರಾಯಣ ನರನಲ್ಲ । ನೀ । ನಾರಯೆ ವೇದದ ಸೊಲ್ಲ ॥ಪ॥
ಕಾರಕ ಫಲಗಳ ಮೀರಿರುತಿಹೆ ಸಂ । ಸಾರಿಯು ನಾನೆನೆ ಸಲ್ಲ ॥ಅ॥

ಅಶರೀರನೆ ದಿಟ ನೀನು ಕ್ಷು । ತೃಷೆಗೆ ದೂರನಲ ನೀನು ।
ಕುಶಲಾಕುಶಲಂಗಳ ಮುಸುಕಿಲ್ಲವು । ಬೆಸನವು ಮತ್ತಿನ್ನೇನು ॥೧॥

ಕರಣವೊಂದು ನಿನಗಿಲ್ಲ ನಿ। ನ್ನರಿವು ಗೈಮೆ ಜಗವೆಲ್ಲ ।
ಮರಪರಿವರಿಯುವ ಪರತರನ್ನೈ ।ಸಂ । ಸರಣದೋಷವಿನಿತಿಲ್ಲ ॥೨॥

ಮೆಚ್ಚಿಪಡೆವುದಿಷ್ಟದೇನು । ನೀ । ಬೆಚ್ಚಿಬಿಡುವದುಂಟೇನು ?
ಸಚ್ಚಿದಾನಂದನು ನೆಚ್ಚಿನ ಭಕುತರಿ । ಗಿಚ್ಚೆಗಿಳಿವ ಸುರಧೇನು ॥೩॥

# ಇದುವೆ ಬ್ರಹ್ಮಾನಂದ

ಬ್ರಹ್ಮಾನಂದ । ಇದುವೆ । ಬ್ರಹ್ಮಾನಂದ ॥ಪ॥

ಒಮ್ಮೆಗೆ ಎಲ್ಲಾ ಕಾಮುಗಳನು । ಮುದ । ಹೊಮ್ಮಿ ಭೋಗಿಸುವ ಚಂದ ॥

ಮಾಡುವದೇನೊಂದಿಲ್ಲ । ನಾ । ಮಾಡದುದೇನೇನಿಲ್ಲ ।
ಮಾಡಬಾರದುದು ಮೊದಲೇ ಇಲ್ಲ । ಬೇಡಿಕೆ ಎಂಬುದೆ ಸಲ್ಲ । ಅದರಿಂ ॥

ಚಿತ್ತದ ಕೊಳೆಯೇನಿಲ್ಲ । ಕಂ । ಡತ್ತ ಪರಿವುದೆಂದಿಲ್ಲ ।
ಚಿತ್ತಸಮಾಧಿಯು ಸುಖ ಬೇಕಿಲ್ಲೆಂ । ಬುತ್ತಮ ಭೂಮಿಕೆಯೆಲ್ಲ । ಅದರಿಂ ॥

ಅರಿವುದು ಎನಗೇನಿಲ್ಲ । ನಾ । ನರಿಯದುದೇನೊಂದಿಲ್ಲ ।
ಅರಿವು ಮರವುಗಳು ಹೊದ್ದದ ಪರಿ ಶಂ । ಕರನಾಗಿರುತಿಹೆನಲ್ಲ । ಅದರಿಂ ॥

# ನಿನ್ನೊಳಗಿಹನೊಬ್ಬಾತ್ಮ

**ಹಿಂದೂಸ್ಥಾನಿ ಕಾಪಿ** **ಆದಿತಾಳ**

ನಿನ್ನೊಳಗಿಹನೊಬ್ಬಾತ್ಮ । ಇದನೀ । ನುನ್ನಿಸಿ ತಿಳಿಯೆ ಮಹಾತ್ಮ ॥ಪ॥

ಕಾರ್ಯಕರಣಗಳ ತೂರಿ । ಪರಣದ । ವಾಯುಗಳೈದನು ಮೀರಿ
ಬೀಯುವರೆಲ್ಲರ ಕಾಣಿಕೆಗಳ ಕೊಂ । ಬಾಯತಿಕೆಯುಳ್ಳರು ಮಾಯನೆನಿಸಿದವ ॥೧॥

ಕಣ್ಣಿಗೆ ತಣ್ಣಿಪನವನು । ಕೈಕಾ । ಲ್ಬಣ್ಣದ ಬೀಡಪನವನು
ವಣ್ಣಿಪ ಮನಕೂ ಮನವಾಗಿಹ ಫಲ ॥ ವಣ್ಣದ ನುಡಿಗಳ ನುಡಿಸುವ ದೇವನು ॥೨॥

ಬುದ್ಧಿಯಹಂಕರಕೆಲ್ಲ । ಅರಿವಿನ । ಸಿದ್ಧಿಯನೀವುದ ಬಲ್ಲ
ಬುದ್ಧಿಗೆ ಬುದ್ಧಿಯ ಹಂಕರ ಕಹವಾ । ಗಿದ್ದು ಬೆಳಗುತಿಹ ಶುದ್ಧ ಶಂಕರನು ॥೩॥

## ಲಾಲಿ ಮುದ್ದಿನ ಕಂದ

**ನವರೋಜು** **ಝಂಪೆ**

ಲಾಲಿ ಮುದ್ದಿನ ಕಂದ ಲಾಲಿ ಗೋವಿಂದ ।
ಲಾಲಿ ಬ್ರಹ್ಮಾಂಡದಾನಂದದುಕ್ಕಂದ ॥ಲಾಲಿ॥ ॥ ಪ ॥

ನಿನ್ನ ನೀ ಮರೆದು ಸಂಸಾರಕಿಳಿತಂದೆ !
ಜನ್ನಬಡಿಸುವ ಬಹಳ ಜನುಮದಲಿ ಬೆಂದೆ!
ಸನ್ನಿಯಿಲ್ಲದ ನರಕಗಳಲಿ ಕಡುನೊಂದೆ ।
ನಿನ್ನ ನೀನರಿದಂದು ಜಗಕೆಲ್ಲ ತಂದೆ ॥ಲಾಲಿ॥ ॥೧॥

ಜಗದಿ ನೀನಿಲ್ಲವೀ ಜಗ ನಿನ್ನೊಳಿಹುದು ।
ಜಗದ ಜನುಮಾದಿಗಳ ಜೀವ ನೀನಹುದು ।
ಹಗರಣವು ಸಾಕಿನ್ನು ನಿಜವ ತಿಳಿ ಮಗುವೆ ।
ನಗುತಲಾನಂದರಸಧಾಮವನೆ ನೀ ಹೊಗುವೇ ॥೨॥

ಕಾಲದೇಶದ ಕಟ್ಟಿನೊಳಗೆ ನೀನಿಲ್ಲ ।
ಕಾಲದೇಶ ನಿಮಿತ್ತ ನಿನ್ನಿಚ್ಛೆಯೆಲ್ಲ ।
ಮೇಲುಕೀಳೆನಿಸುವೀ ಭಾವನೆಗಳೆಲ್ಲ ।
ಬಾಲ ನಿನ್ನಯ ಕನಸು ಲಾಲಿಸೀ ಸೊಲ್ಲ ॥೩॥

ಎಚ್ಚರವು ಕನಸು ತನಿನಿದ್ರೆಯೆಂದೆಂಬ ॥
ಒಚ್ಚತದ ಲೀಲೆಯಲಿ ಕ್ರೀಡಿಸುತ ಡಿಂಭ ।
ಮುಚ್ಚುಮರೆಯಿಲ್ಲದಿಹ ಚೈತನ್ಯ ಬಿಂಬ ।
ಸ್ವಚ್ಛಮಹಿಮೆಯಿದೆಲ್ಲ ನೋಡು ಕಣ್ತುಂಬ ॥೪॥

ಅಳುವದೇಕಿನ್ನೂ ಮೋಹದಿ ಕೊರಗಲೇಕೆ ? ।
ಛಲವದೇತಕೆ ಚಿನ್ನ ಚೀರುವ್ದೇತಕೆ ? ।
ಮುಳಿಯಲೇತಕೆ ಮೌನಮುದ್ರೆಯಿನ್ನೇಕೆ ? ।
ತಿಳಿದು ಶಂಕರನಾಗಿ ನಲಿ ನೀಂ ಪರಾಕೆ ॥ಲಾಲಿ ॥೫॥

## ವಾಸುದೇವ

ವಾಸುದೇವನೀ ಜಗವೆಲ್ಲ । ಇದೆ । ವಾಸುದೇವನೋರ್ವನೆ ಬಲ್ಲ ॥ಪ॥
ವಾಸುದೇವನಾ ವಾಸನೆಯಿಂದ ಸುವಾಸಿತವೆಲ್ಲವು ಸಟೆಯಲ್ಲ ॥ಅ॥

ವಾಸುದೇವನಿಂದ್ರಿಯವೆಲ್ಲ । ಪರ । ವಾಸುದೇವನೇ ಮನವೆಲ್ಲ ।
ವಾಸುದೇವನೀ ಬುದ್ಧಿಯಹಮ್ಮಿದು । ವಾಸುದೇವ ಮತ್ತೇನಲ್ಲ ॥೧॥

ವಾಸುದೇವನೇ ಕ್ಷೇತ್ರಗಳು । ಪೇಳ್ । ವಾಸುದೇವನೇ ಕ್ಷೇತ್ರಜ್ಞ ।
ವಾಸುದೇವ ತಾ ಸರ್ವನಿವಾಸನು । ವಾಸುದೇವನೇ ಸರ್ವಜ್ಞ ॥೨॥

ವಾಸುದೇವ ಜೀವರ ಜೀವ । ಮತ್ತಾ । ವಾಸುದೇವ ದೇವರ ದೇವ
ವಾಸುದೇವ ಪರಮೇಶ್ವರ ಶಂಕರ । ವಾಸುದೇವ ಪರತರ ಭಾವ ॥೩॥

## ಇರುವದೆಲ್ಲ ಒಂದೇ

ಆದಿತಾಳ

ಇರುವದೆಲ್ಲ ಒಂದೇ ಮನವೆ । ಇರುವದೆಲ್ಲ ಒಂದೇ ॥ಪ॥

ಇರುವದೊಂದೇ ಎರಡಿಲ್ಲ ಎಲ್ಲೆಲ್ಲಿಯು ।
ಬರಿದೇ ಏತಕೆ ಬಳಲುವೆ ಅರಸುತ ॥ಅ॥

ಇಗೊ ಅದೆ ನಿನ್ನ ಮುಂದೇ ನೋಡಿಕೊ । ಅಗೊ ಅದೆ ನಿನ್ನ ಹಿಂದೆ ।
ದುಗುಡವ ಬಿಡು ತಿಳಿಗಣ್ಣಲಿ ನೋಡಲು ।
ಬಗೆವುದು ಅದೆ ಎಡ ಬಲಗಡೆಯಲ್ಲಿ ॥೧॥

ಕೆಳಗೆಯು ಅದೆ ನೋಡು । ಮೇಲೆಯು । ಹೊಳೆವದು ಅದೆ ನೋಡು ।
ಒಳಗು ಹೊರಗುಗಳನಳಿಸುತ ತಾನೇ । ಥಳಥಳಿಪುದದೆಲ್ಲಿಯು ನೋಡು ॥೨॥

ಮೊದಲೂ ಅದೆ ಕಾಣೊ । ಮುಂದಕೂ । ಅದೆ ಅಭೇದವ ಕಾಣೋ ।
ತುದಿ ಮೊದಲಿಲ್ಲದ ಶಂಕರತತ್ತ್ವವು ।
ಅದೆ ನಿನ್ನಾತ್ಮವು ಶ್ರುತಿ ಸಾರುತಲಿದೆ ॥೩॥

## ಆರತಿ ಬೆಳಗಿರೆ

ಆರತಿ ಬೆಳಗಿರೆ । ನೀರೆಯರೆಲ್ಲರೂ ॥ಪ॥

ನೀರಜಾಸನ ಸತಿ । ಶಾರದಾದೇವಿಗೆ ॥ಅ॥

ಕುಂದೇಂದು ಗೌರೆಗೆ । ಸುಂದರಾಕಾರೆಗೆ ।
ವಂದಿಸಿ ಮುದದಿ । ಮಂದಗಾಮಿನಿಯರು ॥೧॥

ವಿದ್ಯಾಧಿದೇವೆಗೆ । ಹೃದ್ಯಳೀ ಭಾವೆಗೆ ।
ಸದ್ಯಃ ಪ್ರಸನ್ನೆಗೆ । ಶುದ್ಧಾಂತಃಕರಣದಿ ॥೨॥

ಸುರನರೋವಂದ್ಯೆಗೆ । ಚಿರತರಾನಂದೆಗೆ ।
ಗರಪುರಪಾಲಕಿಂ । ಕರರಾರ್ತಿ ಹಾರಿಣಿಗೆ ॥

## ಬೆಳಗುವೆನಾರತಿಯು

**ಬೇಹಾಗ್** **ಆದಿತಾಳ**

ಬೆಳಗುವೆನಾರತಿಯು । ಶ್ರೀರಾಮಗೆ ॥ಪ॥

ನಾಕಿಗಳ ಭಯಾ । ನೀಕವ ಕಳೆದಾ ।
ಸಾಕೇತ ನಾಥ ದಯಾಕರ ದೇವಗೆ ॥೧॥

ದಶರಥ ಬಾಲಗೆ । ವಶಿಜನ ಪಾಲಗೆ ।
ಶಶಿಮುಖಿ ಸೀತಾ । ವ್ಯಸನ ವಿಚಾಲಗೆ ॥೨॥

ವಾತಾತ್ಮಜನುತ । ಪೂತಚರಣಗೆ ।
ಯಾತುಧಾನ ಜನ । ಭೀತಿವಿತರಣಗೆ ॥೩॥

ಅಚ್ಯುತಧರ್ಮದ । ಕೆಚ್ಚನು ನಡೆಯೊಳು
ಬಿಚ್ಚಿರಿಸಿದಶ್ರೀ ಸಚ್ಚಿದಾನಂದಗೆ ॥೪॥

## ರಾಮನೇ ದಾರಿ

ಬನ್ನಿರಿ ಹೊರಡಿರೆಲ್ಲ ಸೇರಿ । ಇನ್ನು ನಮಗೆ ರಾಮನೆ ದಾರಿ ॥ಪ॥

ಊರುಕೇರಿಯ ಚಿಂತೆಯು ಸಾಕು । ನೂರು ಬಾರಿಗೂ ರಾಮನೆ ಬೇಕು ॥೧॥

ರಾಮನಿಲ್ಲದ ಊರೇ ಕಾಡು । ರಾಮನೆ ಸೌಖ್ಯದ ಶಾಂತಿಯ ಬೀಡು ॥೨॥

ಕಾಮಿನಿಕಾಂಚನಮಾತುಗಳೇಕೆ ? ರಾಮನ ನಾಮವದೊಂದಿರಲಿಕೆ ॥೩॥

ರಾಮನ ಬಿಟ್ಟರೆ ಅದೆ ಭವಬಂಧ । ರಾಮನ ಸಂಗವೆ ಸಚ್ಚಿದಾನಂದ ॥೪॥

## ಬನ್ನಿರಿ ಭಜನೆಯ ಮಾಡೋಣ

ಬನ್ನಿರಿ ಭಜನೆಯ ಮಾಡೋಣ । ಸನ್ನುತ ರಾಮನೊಳಾಡೋಣ ।
ಬಣ್ಣಿಸಿ ನಾಮವ ಪಾಡೋಣ । ನನ್ನಿಯ ಸುಖವನು ಕೂಡೋಣ ॥೧॥

ನಾಮವ ಪಾಡುತ ಕುಣಿಯೋಣ । ನಾಮಮಾಧುರಿಗೆ ತಣಿಯೋಣ ।
ನಾಮದೆ ರಾಮನ ಪೆಣೆಯೋಣ । ನಾಮರಾಮನಿಗೆ ಮಣಿಯೋಣ ॥೨॥

ನಾಮವ ಘೋಷಿಸಿ ನುಡಿಯೋಣ । ನಾಮಾಮೃತವನು ಕುಡಿಯೋಣ ।
ನಾಮರೂಪಗಳ ಕಡಿಯೋಣ । ನಾಮಬ್ರಹ್ಮವ ಪಡೆಯೋಣ ॥೩॥

ನಾಮವ ಕೀರ್ತಿಸುತೇಳೋಣ । ನಾಮಭಜನೆಯಲಿ ಬಾಳೋಣ ।
ನಾಮಸ್ಮರಣೆಯೊಳಾಡೋಣ । ನಾಮದೆ ಮುಳುಮುಳುಗೇಳೋಣ ॥೪॥

ರಾಮನ ಭಜನೆಯೆ ನಮಗಿರಲಿ । ನಾಮಭಕುತಿ ಬೆಳೆಯುತ್ತಿರಲಿ ।
ರಾಮನು ಸಚ್ಚಿತ್ಸುಖನಿರಲಿ । ನಾಮವೇಷದಲಿ ಜಿಹ್ವೆಯಲಿ ॥೫॥

# ರಾಮನ ನಾಮವೆ ಎಲ್ಲವಿದು

**ಮೋಹನ** **ಆದಿತಾಳ**

ರಾಮನ ನಾಮವೆ ಎಲ್ಲವಿದು । ರಾಮನ ಬಿಟ್ಟರೆ ಜಗವಿರದು ॥ಪ॥

ರಾಮನಾಮಗಳ ಭೇದವನುಡುಗಿಸೆ । ರಾಮತತ್ತ್ವವೇ ಉಳಿಯುವದು ॥ಅ॥

ರಾಮನ ನಾಮವೆ ಓಂಕಾರ । ರಾಮನೆ ಬ್ರಹ್ಮವು ಸಾಕಾರ ।
ರಾಮನೆ ನಾಮವು ನಾಮವೆ ರಾಮನು । ರಾಮತತ್ತ್ವವಿಗತಾಕಾರ ॥೧॥

ರಾಮನಾಮದೀ ಗಾತ್ರಗಳು । ಓಮೆಂಬುದರಾ ಮಾತ್ರೆಗಳು ।
ನಾಮವಮಾತ್ರವು ರಾಮತತ್ತ್ವವೆಂ । ದೇ ಮುನಿಗಳ ಸೂತ್ರಗಳು ॥೨॥

ರಾಮರಾಮಾನುಜಭೇದಗಳು । ರಾಮನ ನಾಲ್ಕು ಪಾದಗಳು ।
ರಾಮನ ಪಾದಗಳೋಮಿನ ಮಾತ್ರೆಗ । ಳೀ ಮೊರೆಯುತ್ತಿವೆ ವೇದಗಳೂ ॥೩॥

ರಾಮನು ತುರ್ಯನು ಪರಮಾತ್ಮ । ನಾಮವಮಾತ್ರವು ಅಪನಾತ್ಮ ।
ಈ ಮಹಿಮೆಯೊಳಗಿದನರಿದವ ಪರತರ । ರಾಮನ ಹೊಗುವನು ರಾಮಾತ್ಮ ॥೪॥

ರಾಮನ ನಾಮವನುಚ್ಚರಿಸಿ । ರಾಮಬುದ್ಧಿಯನು ಎಚ್ಚರಿಸಿ ।
ನಾಮಪ್ರಣವದ ಪಾರಾಯಣ ಕೀ । ರಾಮಾಯಣದಲಿ ಸಂಚರಿಸಿ ॥೫॥

ರಾಮನೆ ಗುರು ರಾಮನೆ ಶಿಷ್ಯ । ರಾಮನ ನಾಮವು ಅವಿನಾಶ್ಯ ।
ರಾಮನೆ ಅದ್ವಯ ಸಚ್ಚಿದಾನಂದನು । ರಾಮನ ನಾಮವೇ ಅನ್ವೇಷ್ಯ ॥೬॥

# ಬನ್ನಿರಿ ಬನ್ನಿರಿ ಭಜನೆಗೆ ಬೇಗನೆ

ಬನ್ನಿರಿ ಬನ್ನಿರಿ ಭಜನೆಗೆ ಬೇಗನೆ ರಾಮಭಕ್ತರು ।
ಸನ್ನುತ ಶ್ರೀರಾಮನಾಮದೆ ಪ್ರೇಮಯುಕ್ತರು ॥ಪ॥

ಪತಿತರ ಪೊರೆವುದು ರಾಮನಾಮವು ಭಯವಿನ್ನೇತಕೆ ।
ಸತತವು ಕೀರ್ತನೆ ಮಾಡಿರಿ ಸಾಕಿದು ಕಲಿಯನು ದಾಟಲಿಕೆ ॥೧॥

ರಾಗತಾಳ ಮೇಳೈಸಲಿ ರಾಮನ ನಾಮದ ಗಾನದಲಿ ।
ರಾಗದ್ವೇಷವು ಕೊಚ್ಚಿಹೋಗಲಿ ಪ್ರೇಮದ ಭರದಲ್ಲಿ ॥೨॥

ಒಂದೇ ಸ್ವರದಲಿ ಹಾಡಿರಿ ನಾಮವ ಹೊಂದಿಕೆಯಿಂದ ।
ಬಂಧವೆಲ್ಲವೂ ಬಿಚ್ಚುವದೆಂದನು ಸಚ್ಚಿದಾನಂದ ॥೩॥

# ರಾಮಾಯಣದ ಸಾರ ರಾಮನಾಮವೆ

ರಾಮಾಯಣದ ಸಾರ । ರಾಮನಾಮವೆ ಪೂರ
ಕಾಮಿತದ ದ್ವಾರ । ರಾಮನಾಮ ॥ಪ॥

ರಾಮನಾಮವ ನೆನೆದ । ಬೇಡ ಮುನಿಯಾದ ।
ರಾಮ ಕಾವ್ಯನಾದ । ವೇದವಾಯ್ತು ॥೧॥

ವೇದಸಾರವೆಲ್ಲ । ಬಲ್ಲ ಋಷಿಗಳೆಲ್ಲ ।
ಓದಿ ಪೊಗಳುವದೆಲ್ಲ । ರಾಮನಾಮ ॥೨॥

ರಾಮನಾಮ ಪತಿತಪಾವನವೆಂದು ಸತತ ।
ನೇಮನಿಷ್ಠೆಸಹಿತ । ಭಜಿಪರೆಲ್ಲ ॥೩॥

ಭಜಿಪರೆಲ್ಲ ನರರು । ದೈತ್ಯರು ವಾನರರು ।
ತ್ಯಜಿಸಿ ಕಾಮದ ಬೇರು । ರಾಮರಹರು ॥೪॥

ಅಹರು ದಿಟದಿಂದ । ಸಚ್ಚಿದಾನಂದ ।
ಇಹಪರ ಬಂಧ । ಕಡಿದುಹಾಕಿ ||೫||

# ಆಂಜನೇಯ, ವಂದಿಪೆನಯ್ಯ

**ಆರಭಿ**

ಆಂಜನೇಯ ವಂದಿಪೆನಯ್ಯ । ಅಂಜಿಕೆಯ ಪರಿಹರಿಸಯ್ಯ ।
ಮಂಜುಲಾಂಗ ರಾಮನ ಜೀಯ । ಕಂಜ ಚರಣವ ತೋರಿಸಯ್ಯ ||ಪ||

ಕಾಡುವದೆನ್ನ ಮೋಹಮಾಯ । ಮಾಡಲೇನು ಇಲ್ಲ ಧೈರ್ಯ ।
ಬೇಡುವೆ ನಿನ್ನ ಮಾರುತಿರಾಯ । ಓಡಿ ಬಾ ಹಿಡಿ ಎನ್ನ ಕೈಯ ||೧||

ಕಾಮಕ್ರೋಧಾದಿಗಳ ಬಿಡಿಸು । ನೇಮನಿಷ್ಠೆಯ ಹಾದಿಯ ಹಿಡಿಸು ।
ರಾಮನಾಮದ ರುಚಿಯ ಕೊಡಿಸು । ರಾಮಧ್ಯಾನವ ಮನದೊಳಗಿಡಿಸು ||೨||

ವಿದ್ಯಾಬುದ್ಧಿಯಿಲ್ಲವೆನಗೆ । ನಿದ್ರಾಲಸ್ಯ ತುಂಬಿದೆ ಒಳಗೆ ।
ಬಿದ್ದೆನು ಕಾಲಿಗೆ ಹೇಳಿನ್ನೆನಗೆ । ಹೃದ್ಯ ರಾಮನ ಕಾಂಬುದು ಹ್ಯಾಗೆ ||೩||

ಮರೆಹೊಕ್ಕಿರುವೆ ಹನೂಮಂತ । ಕರುಣದಿ ತೋರಿಸು ಭಕ್ತಿಯ ಪಂಥ ।
ಹರಿ ಸಚ್ಚಿದಾನಂದ ಸೀತಾಕಾಂತ । ಶರಣನ ಮಾಡಿಸು ಸದ್ಗುಣವಂತ ||೪||

# ರಾಮನಾಮದ ಹೊರತು ಜನ್ಮವೃಥಾ

## (ಅಭಂಗ)

ರಾಮನಾಮದ ಹೊರತು ಜನ್ಮ । ವೃಥಾ ಶ್ರಮ ಬೇರಿಲ್ಲ ।
ರಾಮನಾಮವು ಅಮೃತಾಸ್ವಾದ । ಪರಮಾಹ್ಲಾದವಿನ್ನಿಲ್ಲ ||೧||
ರಾಮನಾಮವೊಂದೇ ಘನ । ಸಂಜೀವನ ಮರ್ತ್ಯರಿಗೆಲ್ಲ ||೨||
ರಾಮನಾಮಕೀರ್ತನೆಯಿಂದ । ಸಚ್ಚಿದಾನಂದರಾಹರೆಲ್ಲ ||೩||

# ಕರೆತಾರೊ ರಾಮನ

**ಮುಖಾರಿ**

ಕರೆತಾರೊ ರಾಮನ ಭರದಿಂ ಸುಮಂತ್ರ ||ಪ||

ಕಾಮಿನೀಕಾಂಚನನಾಮರೂಪಕೇ ಮನ
ನೇಮದಿಂ ಸೂರೆಪೋಯ್ತೀ ಮರುಳಾಯ್ತು |
ಪ್ರೇಮದ ಧಾಮನಾ ರಾಮನ ಕಾಣದೆ
ಕ್ಷೇಮವ ಕಾಂಬೆನೆಂತೈ ಮತಿವಂತ ||೧||

ಇರುಳೆಲ್ಲ ಜಾಗರಕೆರವಾದೆನೈ ನರ
ಹರಿಯ ಕಾಣದೆ ಪರಿಪರಿಯ ಚಿಂತೆಯಲಿ |
ತರಪರಿಸಲಾರೆನೈ ದುರಿತದ ಭಾರಕೆ
ಬರಲೊಲ್ಲದೇಕೋ ಸೀತಾವರನ ವೃತ್ತಾಂತ ||೨||

ಸತ್ಯಧರ್ಮಂಗಳ ಮೊತ್ತದ ರಾಮನ
ಚಿತ್ತದಿಂದೋಡಿಸುತ್ತೆತ್ತಲೊ ಕಳುಹಿ |
ಸಚ್ಚಿದಾನಂದನನೊತ್ತರಿಸಿದಮೇಲಿ
ನ್ನೆತ್ತಣ ಸೌಖ್ಯವೈ ಪೇಳ್ಗುಣವಂತ ||೩||

# ರಾಮನಾಮದ ಸವಿಯ ನೋಡು

ರಾಮನಾಮದ ಸವಿಯ ನೋಡು | ನೇಮದಿಂದಲೆ ನಾಲಗೆ |
ಕಾಮಿತಾರ್ಥವನಿಲ್ಲಿ ಪಡವೆ | ಕ್ಷೇಮವುಂಟು ನಾಳೆಗೆ ||೧||

ಭಕ್ಷ್ಯಭೋಜ್ಯಗಳೆಲ್ಲಕು ಮಧುರವು | ಲಕ್ಷಪಾಲಿಗೆ ನಾಲಗೆ
ಇಕ್ಷುಸಿತಖರ್ಜೂರಮಧುರಸ | ಭಿಕ್ಷೆಗೇಕೀ ಜೋಳಿಗೆ ||೨||

ಕಾಮವೆಂಬ ಅರೋಚಕವೆ ನಿರ್ನಾಮವಹುದೆಲೆ ನಾಲಗೆ |
ಭೂಮವಿದ್ಯೆಯ ಹಸಿವು ಹೆಚ್ಚುವ | ದೀ ಮಹೌಷಧದೇಳಿಗೆ ||೩||

ರಾಮರಸವಿದನೀಂಟುತಿರು ನೀ । ಪ್ರೇಮದಿಂದಲೆ ನಾಲಗೆ ।
ನಾಮರೂಪದ ಜಗವಿದೆಲ್ಲವು । ರಾಮನೆ ನಿನ್ನ ಪಾಲಿಗೇ

ತುಚ್ಛಬಾಹ್ಯದ ವಿಷಯಭೋಗದ । ಹುಚ್ಚು ಬಿಡುವದು ನಾಲಗೇ
ಸಚ್ಚಿದಾನಂದ ರಾಮರಸದ । ಅಚ್ಚಮದ್ದಿದು ಬಾಳಿಗೆ

## ದೇವ, ಏತಕ್ಕೆ ಬರಲೊಲ್ಲೆ?

**ಧನ್ಯಾಸಿ** **ಅಟ್ಟತಾಳ**

ಏತಕ್ಕೆ ಬರಲೊಲ್ಲೆ ಎಮ್ಮಯ ಬಳಿಗೀಗ
ಸೀತಾಪತಿ ಪೇಳಯ್ಯ
ಹೇತುವೆನಿಲ್ಲದೆ ಕಾತರಜನರನು
ಭೀತಿಗೊಳಿಸುವದಿದೇತರ ನ್ಯಾಯವೈ ॥ಪ॥

ಎಲೆಮನೆಯಿಲ್ಲವೆ ಜಲತೃಣವಿಲ್ಲವೆ
ನೆಲನ ಹಾಸಿಗೆಯದೇನಿಲ್ಲಿಲ್ಲವೆ ।
ಒಲವಿನಿಂ ಕಾಡೊಳು ನೆಲಸಿರ್ದ ನಿನಗೇನು
ಫಲವೊ ಎಮ್ಮೊಳು ಪೇಳು ನಳಿನಾಕ್ಷ ದೇವ ॥೧॥

ಖರದೂಷಣರ ಕಾಟವಿರದೆ ಚಿತ್ತವನತ್ತ
ಬರಸೆಳೆಯುವ ಮಾಯಾಮೃಗವಿಲ್ಲವೆ ।
ಹರಿಯೆ ತಾಪತ್ರಯಕೆರವಾಗಿಹ ತಾಪ
ಸರು ನಾವಲ್ಲವೇನೈ ದಾನವಾರಿ ॥೨॥

ಕ್ಷಿತಿಯೊಳು ನಮ್ಮಂಥ ಪತಿತರಿಗೆಲ್ಲವು
ಗತಿಯಲ್ಲವೆ ದೇವ ನೀನೋರ್ವನೇ ।
ಮತಿಗೆ ಮಂಗಳವಿತ್ತು ಪತಿಕರಿಸದೆ ಇನ್ನೂ
ಅತಿದೂರವಿಹುದೇನೈ ಸಚ್ಚಿದಾನಂದ ॥೩॥

## ರಾಮ ಬಾರೊ

**ಮಾಯಾಮಾಳವಗೌಳ** **ಏಕತಾಳ**

ರಾಮ ಬಾರೊ ರಘುರಾಮ ಬಾರೊ । ಶ್ರೀ ರಾಮ ಬಾರೊ ।
ಕಾಮಿತದಾಯಕ ಪೂರ್ಣಕಾಮ ಬಾರೊ, ಸುಖಧಾಮ ಬಾರೊ ॥

ಗುರುಭಾರದೀ ಗಂಟ ಹೊರಬೇಕು । ಪಾಪ ತೀರಬೇಕು ।
ನಾವ್ ಕರೆದಾಗ ನೀ ಓಡಿ ಬರಬೇಕು । ಹಿಂದೆ ಇರಬೇಕು । ॥ ೧ ॥

ಕಾಡುವ ರಕ್ಕಸರನ್ನು ಹೊಡೆಯಬೇಕು । ಸದೆ ಬಡಿಯಬೇಕು ।
ಕಾಡಿನಲ್ಲಿ ನಮ್ಮ ಜೊತೆ ನಡೆಯಬೇಕು । ಕೀರ್ತಿ ಪಡೆಯಬೇಕು ॥ ೨ ॥

ಕಲ್ಲಿನ ಎದೆ ಮೆದು ಮಾಡಬೇಕು । ಅಲ್ಲೆ ಆಡಬೇಕು ।
ನಾವೆಲ್ಲ ಸಚ್ಚಿದಾನಂದರಾಗಬೇಕು । ನಿನ್ನ ಹೊಗಬೇಕು ॥ ೩ ॥

## ಶ್ರೀ ರಾಮನ ಪಾದಧೂಳಿಯ ಮಹಿಮೆ
### (ಅಭಂಗ)

ಕೇಳಿ ರಾಮನ ಪಾದ–ಧೂಳಿಯ ಹಿರಿಮೆ ।
ಬಾಳಿ ಬದುಕಿರೊಮ್ಮೆ–ಶಿರದೊಳಾಂತು ॥ ಪ ॥

ಗೌತಮನ ಭಾರ್ಯೆ–ಪೂತಳಾದಳಾಕೆ ।
ಖ್ಯಾತಳೆಲ್ಲ ಜಗಕೆ–ಧೂಳಿಸೋಕೆ ॥ ೧ ॥

ಗುಹನು ನಿಷಾದ–ಭಕ್ತವರನಾದ ।
ಮಹಿಮೆಯ ತಳೆದ–ಧೂಳಿಯಿಂದ ॥ ೨ ॥

ದಂಡಕಾರಣ್ಯ–ಪುಣ್ಯಭೂಮಿಯಾಯ್ತು ।
ಕಂಡು ಪಾಪ ಹೋಯ್ತು–ಧೂಳಿಯನ್ನು ॥ ೩ ॥

ಸುಗ್ರೀವ ಕಪೀಶ-ರಗ್ರಗಣ್ಯನಾದ ।
ಕು-ಗ್ರಾವ ತೇಲಿಸಿದ ನೀರ ಮೇಲೆ ॥ ೪ ॥

ವಿಭೀಷಣನಂದು-ಪರಮಪೂಜ್ಯನಾದ ।
ಈ ಭಾಸ್ವರ ಪಾದ - ಧೂಳಿಯಿಂದ ॥ ೫ ॥

ನಿಚ್ಚ ಧೂಳಿಯ ಮೇಲೆ - ಹೊರಳಿ ಪ್ರೇಮದಿಂದ ।
ಸಚ್ಚಿದಾನಂದ - ರಾಗಿರೆಲ್ಲ ॥ ೬ ॥

## ಜಯಜಯಜಯ ರಘುವೀರ ಸಮರ್ಥ

**ಕಲ್ಯಾಣಿ**

ಜಯ ಜಯ ಜಯ ರಘುವೀರ ಸಮರ್ಥ
ಭಯಪೂಗ ಸಂಹಾರ । ಸಾಕೇತನಾಥ ॥ ಪ ॥

ನಿತ್ಯಶುದ್ಧಬುದ್ಧ ಮುಕ್ತ ಸ್ವರೂಪ ।
ನಿತ್ಯಧರ್ಮಾವನ । ಲೀಲಾರೂಪ । ॥ ೧ ॥

ದಶರಥ ಬಾಲ । ದಶಶಿರ ಕಾಲ ।
ವಶಿಜನಹೃದ್ಗುಹಾ ವಿಹರಣಶೀಲ ॥ ೨ ॥

ವಿಶ್ವಾಮಿತ್ರ ವಸಿಷ್ಠಾಂತರಂಗ ।
ವಿಶ್ವಾಶಿವನಾಶ ದಕ್ಷ ಶುಭಾಂಗ ॥ ೩ ॥

ಪತಿತಾವನಚಣ ಕೋಮಲಚರಣ ।
ನತಜನಬಾಂಧವ ಕರುಣಾಭರಣ ॥ ೪ ॥

ಪ್ರಾಚೇತಸವರ್ಣಿತಗುಣಬೃಂದ ।
ವೀಚೋಚ್ಚಸಮ ನಿತ್ಯಸಚ್ಚಿದಾನಂದ ॥ ೫ ॥

## ಕೇಳಯ್ಯ ರಾಮಚಂದ್ರ

ಕೇಳಯ್ಯ ರಾಮಚಂದ್ರ । ಪಾಲಿಸೆಮ್ಮ ದಯಾಸಾಂದ್ರ
ಖೂಳರಕ್ಕಸರ ಬಾಧೆ । ತಾಳಲಾರೆವ್ವೆ ನಿಸ್ತಂದ್ರ ॥

ಇಹ ಸೌಖ್ಯವೆಲ್ಲ ತೊರೆದು । ಬಹುಕಷ್ಟವೆಲ್ಲ ಮರೆದು ।
ಸಹಿಸುತೆ ಶೀತೋಷ್ಣವ ನಿಂ । ದಿಹೆವೈ ಜಾನಿಸುತಲಿ ನಿನ್ನನೆ ॥ ೧ ॥

ಕಾಮಿತರೂಪವ ಧರಿಸಿ । ಕಾಮಾದಿಗಳನು ಬರಿಸಿ ।
ನೇಮನಿಷ್ಠೆ ಜಪತಪಗಳ । ರಾಮಾ, ಮರೆಸಿದರೀ ದುರುಳರು ॥ ೨ ॥

ಹಿಂಸಿಸಿ ಕೊಂದರು ನಮ್ಮಯ । ವಂಶದವರನೇ ನಿರಾಮಯ ।
ಶಂಸಿಪೆವೇನಿದ ಪರಮ । ಹಂಸಾತ್ಮನೆ ಸಚ್ಚಿತ್ಸುಖ ರಾಘವ ॥ ೩ ॥

## ಧನ್ಯರು ನಾವೇ ಶ್ರೀ ರಘುವರ

ಧನ್ಯರು ನಾವೇ ಶ್ರೀ ರಘುವೀರ ನಿನ್ನ ಕಂಡೆವಾಗಿ । ಈ ದಿನ ।
ಮಾನ್ಯರು ಮತ್ತಾರಿರುವರು ಭುವಿಯಲಿ ನಿನ್ನವರ್ ಹೊರತಾಗಿ ॥ ೧ ॥

ಸಿರಿವೈಕುಂಠವ ಸಾಕೇತವಬಿಟ್ಟು ಚರಣಚಾರಿಯಾಗಿ । ಮರುಕದಿ ।
ಗಿರಿನದಿಗಳ ಲೆಕ್ಕಿಸದೀ ಭಯುಗಹ್ವರಕೆ ಬಂದೆಯಾಗಿ ॥ ೨ ॥

ಮಾಯಾರಕ್ಕಸರುರುಬೆಗೆ ಬೇಗುದಿ ಬೇಯುತಿದ್ದೆವಾಗಿ । ಅನುದಿನ ।
ನೋಯುವರೆನ್ನವರೆನ್ನುತ ಕರುಣದ ಮೈಯ ತೋರ್ದೆಯಾಗಿ ॥ ೩ ॥

ಜಪತಪವೆಲ್ಲವು ಫಲಿಸಿತು ಕಷ್ಟವು ಸ್ವಪನಕೆ ಸಮನಾಗಿ । ಎಲ್ಲವು ।
ತಪನಕುಲೋತ್ತಮ ನೀನಿರೆ ನಮ್ಮಯ ಗುಪಿತದ ಧನವಾಗಿ ॥ ೪ ॥

ಇಹಪರದಾಸೆಯು ಇಂಗಿತವಿದ್ಯೆಯ ದಹನ ನೀನೆಯಾಗಿ । ಅವಿದ್ಯೆಯ ।
ಅಹಹ ಸಚ್ಚಿದಾನಂದನೆ ಕಾಪಿಡುತಿಹೆಯಲೆ ಗುರುವಾಗಿ ॥ ೫ ॥

## ನೋಡಬನ್ನಿ ರಾಮ ಬಂದ

ನೋಡಬನ್ನಿ ರಾಮ ಬಂದ ॥ ಪ ॥

ಕೌಶಿಕಮಖವನು ಪೊರೆದ । ಪಿಶಿತಾಶನರುರುಬೆಯ ತರಿದ ।
ಈಶನಬಿಲ್ಲನು ಮುರಿದ । ಕೋಸಲೆಗೆ ಕೀರ್ತಿಯ ತಂದ ॥ ೧ ॥

ಮುನಿಭಾರ್ಯೆಯ ಶಾಪವ ತೊಡೆದ । ನೃಪ ಜನಕನ ಚಿಂತೆಯ ಕಡಿದ ।
ವನಜಾಂಬಕಿಯಳ ಕರಪಿಡಿದ । ಸುಖ ವನಧಿಯೊಳಾಡುತ ಮಿಂದ ॥ ೨ ॥

ವೈಷ್ಣವ ಧನುವನು ಸೆಳೆದ । ಪ್ರಭವಿಷ್ಣುವೆಂದು ಜಸದಳೆದ ।
ವಿಷ್ಣುವೀರ್ಯದಲಿ ಬಳೆದ । ವರ್ಧಿಷ್ಣು ಸಚ್ಚಿದಾನಂದ ॥ ೩ ॥

## ಚಿನ್ನದ ಮೃಗ

ಪರ್ಣಶಾಲೆಯ ಮುಂದೆ ಚಿನ್ನದ ಮೃಗವೊಂದು
ಟಣ್ಣನೆ ಹಾರಿತು ನಾಥನೆ ।
ಬಣ್ಣಕೆ ಬೆರಗಾಗಿ ಕುನ್ನಿಯಾಗದಿರು
ನಿನ್ನೊಳೆ ನೀನಿರು ಸೀತೆಯೆ ॥ ೧

ಚಿನ್ನಬೆಳ್ಳಿಯಪಕ್ಕೆ ರನ್ನದ ಕೋಡಿದೆ
ಕನ್ನೈದಿಲೆಮುಖ ನಾಥನೆ ।
ಕಣ್ಣಿಲಿ ನೋಡದಿರಿನ್ನದ ರಕ್ಕಸ–
ಗನ್ನಗತಕವಿದು ಸೀತೆಯೆ ೨ ॥

ಕಾಮನಬಿಲ್ಲಿನ ರಾಮಣೀಯಕ ಪುಚ್ಛ
ಸೀಮೆಯೊಳಿದೆ ನೋಡು ನಾಥನೆ ।
ಕಾಮರೂಪರು ದೈತ್ಯರೀ ಮಾಯಕೆ ಬಾಲೆ
ನೀ ಮರುಳಹರೆ ಸೀತೆಯೆ ॥ ೩ ॥

ವೈದೂರ್ಯಖುರ ತೆಳುವಾದ ಜಂಘೆಯೊಳೆನಿ
ತೋ ದೂರ ನೆಗೆದುದು ನಾಥನೆ ।
ಹೋದದ್ದು ಹೋಗಲಿ ಖೇದಗೊಳ್ಳದೆ । ನೀ ನಿ
ರ್ವೇದದಿ ಕಿರುಗಿತ್ತು ಸೀತೆಯೆ ॥ ೪ ॥

ಬೇಸರವಾಗಿದೆ ಭಾಸುರವ್ಮೃಗವಿದ
ರಾಸೆಬಾಧಿಸುತಿದೆ ನಾಥನೆ ।
ನೀ ಸಚ್ಚಿದಾನಂದನಾಸರೆಯನು ಬಿಟ್ಟು
ಓಸರಿಸುವೆಯೇಕೆ ಸೀತೆಯೆ ॥ ೫ ॥

## ರಾಮನ ಕಂಡಿರಾ

ರಾಮನ ಕಂಡಿರಾ । ನಮ್ಮ ರಾಮನ ಕಂಡಿರಾ ॥ ಪ
ರಾಮನ ಸ್ವಾತ್ಮಾರಾಮನ ಜಗದಭಿ
ರಾಮನ ಸತ್ಯಪ್ರೇಮನ ಶ್ರೀರಘು ॥ ಅ ಪ ॥

ನಿತ್ಯತೃಪ್ತನವನು । ಲೀಲಾ । ಮರ್ತ್ಯ ವೇಷದವನು ।
ಸತ್ಯಧರ್ಮಗಳ ಮೂರ್ತಿಯು ಕೃತ್ಯಾ–
ಕೃತ್ಯವನರುಹಲಿಕಿತ್ತ ಬಂದವನು ॥ ೧ ॥

ದಶರಥನಂದನನು । ಕೌಸಲ್ಯೆಯ । ಬಸಿರೊಳು ಬಂದವನು ।
ಅಸಮಪರಾಕ್ರಮ ಬಿಸಜಸಖಿನಕುಲ–
ಯಶೋಬ್ಧಿಚಂದ್ರನು ಸದ್ಗುಣಸಾಂದ್ರನು ॥ ೨ ॥

ಲಕ್ಷ್ಮಣಸಖನವನು । ಸಕಲ ಸು । ಲಕ್ಷಣಯುತನವನು ।
ಶಿಕ್ಷಿತವೇದಾದ್ಯಕ್ಷರ ವಿದ್ಯನು ।
ದಕ್ಷನು ಶರಗಳ ಲಕ್ಷ್ಯವೇಧದಲಿ ॥ ೩ ॥

ಭರತಬಂಧುವವನು । ಕರುಣಾ । ಭರಿತ ಸಿಂಧುವವನು ।
ಶರಣಾಗತಶತ್ರುಘ್ನನು ಯೋಗಿಗಳ್
ಅರಸಿ ಕಾಣದಿಹ ಪರತರರೂಪನು ॥ ೪ ॥

ಅಚ್ಯುತಾತ್ಮನವನು । ಭಕ್ತಗೆ । ಮೆಚ್ಚಿ ತೋರುವವನು ।
ಸ್ವಚ್ಛಹೃದಯದವರಿಚ್ಛೆಯ ಸಲಿಸುವ
ನೆಚ್ಚಿನ ಬಿರುದಿನ ಸಚ್ಚಿದಾನಂದನು ॥ ೫ ॥

## ನಂಜಪ್ಪ ಭಾಗವತರ ಕೃತಿಗಳು

### ಭಗವಂತನಲ್ಲಿ ಬೇಡಬೇಕಾದದ್ದು

**ಶಂಕರಾಭರಣ** **ಆಟತಾಳ**

ಕರುಣಿಸಿ ಕಾಯೊ ಎನ್ನ । ಸಾಕೇತರನ್ನ ॥ ಪ ॥
ಕರಣವೆಲ್ಲಕೂ ನಿನ್ನ ಪರಮಸೇವೆಯನಿತ್ತು ॥ ಅ ಪ ॥

ನಿನ್ನ ಭಕ್ತರ ಕೂಡಿ ನಿನ್ನ ಭಕ್ತರೊಳಾಡಿ ।
ನಿನ್ನ ಭಕ್ತರ ಸೇವೆ ಮಾಡಿ ಮಾಡಿ ॥
ನಿನ್ನ ನಾಮಾಮೃತ ಪಾನದಿ ಹಿಗ್ಗುತ ।
ನಿನ್ನ ಸನ್ನಿಧಿಯೊಳಗೆನ್ನ ಮರೆವ ಮನವ ॥ ೧ ॥

ಜಗದ ನಾರಿಯರೆಲ್ಲ ಸೀತಾದೇವಿಯರಾಗಿ ।
ಜಗದ ಪುರುಷರೆಲ್ಲ ರಾಮರಾಗಿ ॥
ಹಗಲಿರುಳೆನ್ನಯ ಬಗೆಗೆ ತೋರುತ ಮಿಕ್ಕ ।
ಹಗರಣವಿಲ್ಲದ ಮಗುವಿನ ಭಾವವ ॥ ೨ ॥

ಮನೆಯನು ಮರೆದೆನ್ನ ಮಡದಿ ಮಕ್ಕಳ ಮರೆದು ।
ತನುವನು ಮರೆದುದರ ನೆನಹ ಮರೆದು ॥
ಜನಕಜೆ ಲಕ್ಷ್ಮಣರೊಡನಿಹ ನಿನ್ನನು ।
ಮನದೊಳಗನುದಿನ ನೆನೆಯುವ ಭಾಗ್ಯವ । ॥ ೩

ಎಲ್ಲವರೊಳು ನಿನ್ನನೆಲ್ಲರ ನಿನ್ನೊಳು ।
ಎಲ್ಲಾ ಕಾಲದಿ ಕಂಡು ಸುಖಿಸುತಲಿ ॥
ಎಲ್ಲವೂ ನೀನಾಗಿ ನೀನೇ ನಾನೆಂದೆಂಬ ।
ಸೊಲ್ಲಿನ ನೆಲೆಕಂಡು ಸ್ವಸ್ಥನಾಗಿರುವದ ॥ ೪ ॥

ಭಾಗವತರ ಪಾದಧೂಳಿಯು ಶಿರದೊಳು ।
ಬಾಗಿಧರಿಸಿ ರಾಗದೂರನಾಗಿ ॥
ಆಗುಹೋಗುಗಳ ಸೋಂಕಿಲ್ಲದೆ ಸಮತೆಯು ।
ನೇಗಳೂ ಬೆಳಗುವ ಸುಖದ ಸ್ವರೂಪವ ೫ ॥

## ರಾಮನ ತೋರಿಸು ನೀ

**ಬೇಹಾಗ್** **ಆದಿತಾಳ**

ರಾಮನ ತೋರಿಸು ನೀ ಮಾರುತಿ ॥ ಪ ॥

ಶರಣ ರಕ್ಕಸರೆನ್ನ ಹರಣಗೈದಿಹರಿನ್ನು ।
ಕೊರಗುತಿರುವೆ ರಾಮನಿರವನರಿಯದೆ ॥ ೧ ॥

ಕಾಮರಹಿತ ಶ್ರೀ ರಾಮನಾಮಾಂಗುಲೀ ।
ಪ್ರೇಮದ ಕುರುಹಿತ್ತು ಕ್ಷೇಮವನರುಹಿ ಶ್ರೀ ॥ ೨ ॥

ಶಮದಮವಾನರರಮಿತಬಲವ ಕೂಡಿ ।
ಭ್ರಮೆಯು ದೈತ್ಯರನೆಲ್ಲ ಶಮನಗೊಳಿಪ ಶ್ರೀ ॥ ೩ ॥

ರಾಮನೊಡನೆ ಎನ್ನ ನೇಮದಿ ಕೂಡಿಸೆ ।
ಪ್ರೇಮಹಾರವ ನೀನೆ ನೀ ಮನ ಮಾಡಿ ಶ್ರೀ ॥ ೪ ॥

ಯೋಗಿಗಳರಸನ ಬೇಗ ಕಾಂಬುವ ಪುಣ್ಯ ।
ಭಾಗಿಯು ಮಾಡೆನ್ನ ಭಾಗವತಾಗ್ರಣಿ ॥ ೫ ॥

## ಹುಚ್ಚರ ಸಂತೆಯಲ್ಲ

**("ಉದರವೈರಾಗ್ಯವಿದು"ಎಂಬಂತೆ)** **ಆದಿತಾಳ**

ಹುಚ್ಚರ ಸಂತೆಯಲ್ಲ ಜಗವಿದು ॥ ಪ ॥
ಅಚ್ಯುತ ಸೌಖ್ಯದ ಸ್ವಚ್ಛಮತಿಯು ಬಿಟ್ಟ ॥ ಅ ಪ ॥

ತನುವು ತಾನೆಂಬ ಹುಚ್ಚು ಕರಣವ ತಣಿಸಲು ಕುಣಿವ ಹುಚ್ಚು ।
ಧನವ ದುಡಿವ ಹುಚ್ಚು ಮನವ ಮೆಚ್ಚಿಪ ಹುಚ್ಚು ।
ಇನಿಯರ ತನಯರ ಮೋಹದ ಹುಚ್ಚು ॥ ೧ ॥

ಓದಿ ಬರೆವ ಹುಚ್ಚು ಸಭೆಯಲಿ ವಾದಿಸಿ ಗೆಲುವ ಹುಚ್ಚು ।
ಬೀದಿವರಿವ ಹುಚ್ಚು ಕಾದಾಡುವ ಹುಚ್ಚು ।
ಬಾಧಿಸಿ ದೀನರ ಬಾಳುವ ಹುಚ್ಚು ॥ ೨ ॥

ಕುಲವು ಪಿರಿದೆಂಬ ಹುಚ್ಚು ಹೆಚ್ಚಿನ ನೆಲನಿಹುದೆಂಬ ಹುಚ್ಚು ।
ಚಲುವ ತಾನೆಂಬ ಹುಚ್ಚು ಪರಹಿಂಸೆಯ ಹುಚ್ಚು ।
ತಿಳಿಯದಿದ್ದರು ತಾನು ತಿಳಿದವನೆಂಬ ಹುಚ್ಚು ॥ ೩ ॥

ಪರಧನಕೆಳಸ ಹುಚ್ಚು ಪರಸ್ತ್ರೀಯರನೊಲಿಸುವ ಹುಚ್ಚು ।
ಪರ ನಿಂದೆಯ ಹುಚ್ಚು ಪರಹಿಂಸೆಯ ಹುಚ್ಚು ।
ಪರರ ಮೇಲನು ನೋಡಿ ಕರುಬುವ ಹುಚ್ಚು ॥ ೪ ॥

ಭೋಗವನಗಳಿಪ ಹುಚ್ಚು ಮೋಹದಿ ಬೀಗುವ ಬರಿಯ ಹುಚ್ಚು ।
ಭಾಗವತರ ಪದ ಭಾಗಧೇಯದಿ ಭಕ್ತಿ ।
ಯೋಗದೊಳಾಡುವ ಮಾಗಿದ ಹುಚ್ಚು ॥ ೫ ॥

## ಬರಿದೆ ಮಿರುಗುವ ವಸ್ತುವೆಷ್ಟಿದ್ದರೇನಹುದು ?

**ಕಲ್ಯಾಣಿ** **ಝಂಪೆ**

ಬರಿದೆ ಮಿರುಗುವ ವಸ್ತುವೆಷ್ಟಿದ್ದರೇನಹುದು ?
ತಿರುಳಿಲ್ಲದಿಹ ಫಲವ ಮೆದ್ದಂತೆ ವ್ಯರ್ಥ ॥

ಫಲವ ಬಿಡದಿಹ ಮರನು ಪಿರಿದಾಗಿ ಬೆಳೆದೇನು ?
ಜಲವೆ ತೋರದ ಕೊಳನ ಶೃಂಗಾರವೇನು ? ।
ನಲವನರಿಯದ ನಾರಿ ಚಲುವೆಯಾದೊಡನೇನು ?
ಬಲವಿಲ್ಲದಾ ಭಂಟ ಛಲಗೈದೊಡೇನು ? ॥ ೧

ಮಾರನನು ಜಯಿಸದವ ಯತಿಯಾಗಿ ಫಲವೇನು ?
ಮೀರಿ ನಡೆಯುವ ನರನು ಗುರುವಾದರೇನು ? ।
ಕ್ರೂರತನ ಬಿಡದವನ ಶಾಸ್ತ್ರದರಿವಿನೊಳೇನು ?
ಚಾರಿತ್ರ್ಯ ಕೆಟ್ಟವನ ಸತ್ಕುಲದೊಳೇನು ? ॥ ೨ ॥

ತ್ಯಾಗಿಯಾಗದ ಮನುಜನೈಶ್ವರ್ಯದಿಂದೇನು ?
ಭೋಗಕ್ಕೆ ಹರಿಯುವನ ಯೋಗದಿಂದೇನು ? ।
ಭಾಗವತರಾ ದಿವ್ಯ ಹೃದಯದಲಿ ನೆಲೆಸಿರುವ ।
ರಾಘವನ ಬಿಟ್ಟುಳಿದ ಭಾಗ್ಯದಿಂದೇನು ? ॥ ೩ ॥

## ಭಜಿಸು ಮನವೆ ಗುರುವ

ರಾಗ ಅಟತಾಳ

ಭಜಿಸು ಮನವೆ ಗುರುವ,
ನಿನ್ನ ನಿಜವ ತಿಳುಪಿ ಧನ್ಯನೆನಿಸುವ ಮೂರ್ತಿಯ ॥ ಪ ॥

ಶರಣರ ಸಂರಕ್ಷಿಪ ವರವ್ಯಾಜದಿ ।
ನರನಾಗಿ ಅವತರಿಸಿಯೆ ಸದ್ಭಕ್ತರ ।
ಕರೆಕರೆಪಡಿಸುವ ಸಂಸಾರಪಾಶವ ।
ಹರಿಗಡಿದಾಕ್ಷಣ ಮಾಯಾವರಣದ ।
ಪಿರಿದು ತಮಕೆ ಚಂಡಭಾನುವಿನಂತಾದ ।
ಪರಮಪಾವನದ ಗಾಯತ್ರಿ ಮಂತ್ರದೊ ।
ಳಿರುವ ಅರ್ಥವ ಬಿಚ್ಚಿ ಒರೆದು ಕಾರುಣ್ಯದಿ ।
ಭರದಿಂದ ರಕ್ಷಿಸುತ । ಚಂಚಲವೆಂಬ ।
ತರುಮೂಲ ಛೇದಿಸುತ ಈ ವಿಶ್ವದಿ ।
ಬೆರೆದು ತಾ ತುಂಬಿರುತಾ ಅಜ್ಞರ ಮನ ।
ಕರಿಯ ಬಾರದ ನಿಜ ತಾ ತಾನಾಗಿರ್ಪ ।
ಪರಮವಾರಿಧಿ ಸಹಜಾನಂದಮೂರ್ತಿಯ ॥ ೧ ॥

ಉತ್ತಮ ಷಣ್ಮುಖಿ ಮೊದಲಾದ ಮುದ್ರೆಗ ।
ಳೊತ್ತಿ ತಿಳುಪಿ ಸಾಂಖ್ಯ ತಾರಕ ಯೋಗದಿ ।
ಚಿತ್ತದ ಮಲಿನವ ಪರಿಹಾರ ಮಾಡಿಯೆ ।
ಮತ್ತೆ ತತ್ತ್ವಮಸಿ ಸತ್ಯವಾದರ್ಥವ ।
ಬಿತ್ತರಿಸಿಯೆ ವಾಚ್ಯಲಕ್ಷ್ಯದ ಇರವನು ।
ನಿತ್ಯವೆಂದೂ ಅಹಮಸ್ಮಿ ಎಂಬುವ ಶ್ರುತಿ ।
ಪ್ರತ್ಯಗಾತುಮ ಪರಮಾತುಮಾಭೇದದ ।
ಅರ್ಥವ ಶಿಷ್ಯರಿಗನುಭವ ತಿಳುಹಿಯೆ ।
ಸತ್ಯಸಮಾಧಿಯ ದಯಪಾಲಿಸಿದಂಥ ।
ವಸ್ತು ಮೂರುತಿ ಈತನು ನಿತ್ಯಾನಿತ್ಯ ।
ವಸ್ತು ಸಾಕ್ಷಿ ತಾನೀತನು ಜ್ಞಾನಾನಂದ ।
ತೃಪ್ತ ಸಂವಿನ್ಮಾತ್ರನು ಗಗನದಂತೆ ।
ನಿತ್ಯಸ್ವರೂಪ ತಾನು ತಾನಾಗಿರ್ಪ ।
ನಿತ್ಯನಿರಂಜನ ನಿರಘ ನಿರುಪಮನನು ॥ ೨ ॥

ಆರುಲಿಂಗದ ತಾತ್ಪರ್ಯಸಹಿತವಾಗಿ ।
ಭೂರಿಶ್ರವಣಗೈವ ಪರಿಯನ್ನೆ ತಿಳುಪಿಯೆ ।
ಮೂರರಿಂ ಕೂಡಿದ ಮನನವ ತಿಳುಪಿಯೆ ।
ಪಾರುಗಾಣಿಪ ನಿಧಿಧ್ಯಾಸವ ತಿಳುಪಿಯೆ ।
ಸಾರಿ ಮಂತ್ರಾಲಯಭಾವ ಅಭಾವವ ।
ಆರೈದು ತರ್ಕಯುಕ್ತ್ಯಾನುಭವಗಳಿಂದ ।
ಚಾರುಸಾಯುಜ್ಯವ ಶರಣರಿಗೊಲಿದುಭ ।
ವಾರಣ್ಯದಂತ್ಯವ ತೋರಿ ರಕ್ಷಿಸುವಂಥ ।
ಕಾರಣ ಮೂರುತಿಯ ನಿಗಮತತಿ ।
ಸಾರಿ ಮುಟ್ಟದ ಯತಿಯ ಜ್ಞಾನೈಕವಿ ।
ಚಾರಶಾರದಶಶಿಯ ಏಕಾಗ್ರದಿ ।
ಜಾರದೆ ಧ್ಯಾನಿಸು ಚೆನ್ನಾರ್ಯ ಚರಣವ ॥ ೩ ॥

# ಭಗವಂತನಲ್ಲಿ ಮೊರೆ

ಕೃಷ್ಣ ರಕ್ಷಿಸೆನ್ನನು । ಕಷ್ಟನಷ್ಟವಿನ್ನೇನು ।
ಇಷ್ಟು ದಿವಸ ನೊಂದೆನು । ಈಗ ನಿನ್ನ ಸಾರ್ದೆನು ॥ ಪ

ಸ್ವಾಮಿ ಷಡ್ಗುಣೇಶನೇ । ಸ್ವಾಮಿ ಲೋಕವಂದ್ಯನೆ ।
ಕಾರುಣಿಕರೂಪನೆ । ಕಾಮಿತಾರ್ಥದಾತನೆ । ॥ ೧ ॥

ಮಾಯೆಯಿಂದ ಲೋಕವು । ಮೋಹಿಸಿತು ಮಿಥ್ಯವು
ಕಾಯುದಭಿಮಾನವು । ಕಾಡುತ್ತಿದೆ ಕುಹಕವು ॥ ೨ ॥

ನಾನು ಎಂಬ ಮಾನವು । ನನ್ನದೆಂಬ ಭಾವವು ।
ಹೀನ ವಿಷಯಭೋಗವು । ಹೀಗೆ ಬಂತು ಬಂಧವು ॥ ೩ ॥

ನಾನೂ ಹೀಗೆ ಮುಳುಗಿದೆ । ನಿತ್ಯವೆಂದು ನೆನಸಿದೆ ।
ದೀನವೃತ್ತಿ ಹೊಂದಿದೆ । ಹೆದರಿ ಕಡೆಗೆ ನಡುಗಿದೆ ॥ ೪ ॥

ಇದರಲ್ಲೇ ನಾನಿರುವೆನು । ಇಷ್ಟವೆಂದು ಬಗೆದೆನು ।
ಭವದಿ ದಗ್ಧನಾದೆನು । ಬಹಳ ಕ್ಲೇಶಪಟ್ಟೆನು ॥ ೫ ॥

ದೇಹವಾತ್ಮವೆಂದೆನು । ದಾರಪುತ್ರ ಗೃಹವನು ।
ಸ್ನೇಹವಿಟ್ಟು ಸೇರ್ದೆನು । ಸತ್ಯವೆಂದು ಬಗೆದೆನು ॥ ೬ ॥

ಮೋಹ ಮುಚ್ಚಿತೆನ್ನನು । ಮೋಸ ಹೋಗಿ ನೊಂದೆನು ।
ಬಾಹ್ಯಬುದ್ಧಿಯಾದೆನು । ಬಳಗವೆಂದು ಬೆರೆತೆನು ॥ ೭ ॥

ಸುಜನರನ್ನು ಸೇರದೆ । ಸ್ವಜನರೆಂದು ಸಾರಿದೆ ।
ಕುಜನರನ್ನು ಕೂಡಿದೆ । ಕುತ್ಸಿತವ ತಾಳಿದೆ ॥ ೮ ॥

ಮಿಥ್ಯವಾದ ಕರ್ಮವು । ಸತ್ಯವೆಂಬ ಭಾವವು ।
ವ್ಯರ್ಥವಾದ ವಿಷಯವು । ವರ್ತಿಪ ಸದ್ಭಾವವು (?) ॥ ೯ ॥

ಸಕಲವಸ್ತು ಸೇರಿತು । ಸ್ವಪ್ನದಂತೆ ಹಾರಿತು ।
ವಿಕಲಬುದ್ಧಿ ನಿಂತಿತು । ವಿಪರೀತವಿದಾಯಿತು ॥ ೧೦ ॥

ವಿಪರೀತವೇನೆನ್ನಲು । ವಿವರಿಸಲು ಸಲ್ಲದು (?)
ವಿಫಲವಿಷಯಕೆಳಸಲು । ವಿಷಮದಲ್ಲಿ ಬಳಲಲು ॥ ೧೧ ॥

ದೇಹವಾತ್ಮನೆಂಬುದು । ದೇವನ್ನರಿಯದಿರುವದು ।
ದ್ರೋಹವಿದು ದೊರೆವದು । ದುಷ್ಟಬುದ್ಧಿ ನಿಲುವದು ॥ ೧೨ ॥

ದುಃಖವೀವ ದೇಹವು । ದಿವ್ಯವೆಂಬ ಭಾವವು ।
ಸೊಕ್ಕುತ್ತಿರುವ ಸೌಖ್ಯವು । ಸಿಕ್ಕಿ ಕಡೆಗೆ ವಿರಸವು । ॥ ೧೩ ॥

ಕ್ಷೀಣವಸ್ತು ಗ್ರಹಿಪುದು । ಕಾಮದಲ್ಲಿ ಕುದಿವುದು ।
ಕಾಣುತ್ತಲ್ಲೆ ನಲಿವುದು । ಕಷ್ಟವಿತ್ತು ಕೊಲುವದು ॥ ೧೪ ॥

ಲೋಕಮಾತ್ರವೆಲ್ಲವೂ । ಲೀನವೆನ್ನ ಚಿತ್ತವು ।
ತಾಕಿತಲ್ಲೆ ಕಷ್ಟವು । ತಾನೆ ಬಂತು ಬಂಧವು ॥ ೧೫ ॥

ಇಂತು ವಿಪರೀತಾರ್ಥವು । ಇಷ್ಟಾ ಮನಸಾ ನೆಲಸ್ಯಾವು ।
ನಿಂತು ತಾವೆ ನಲಿವವು । ನಿಜದಿ ನೋಡೆ ಸಲ್ಲವು ॥ ೧೬ ॥

ಎಲ್ಲ ವಿಷಯವಿಂಥವು । ಇಷ್ಟವೆಂದು ಎಣಿಸೋವು ।
ನಿಲ್ಲದೆ ತಾವ್ ಸಡಿಲ್ಯಾವು । ನಿಜದಿ ನೋಡೆ ನಿಲ್ಲವು ॥ ೧೭ ॥

ದ್ವಂದ್ವಗಳ ಕಾಟವು । ದುಃಖವ ತಂದಿಟ್ಟವು
ಇಂಥ ಪಾದಪದ್ಮವು । ಎನಗೆ ಎಲ್ಲಿ ದೊರೆತಾವು ? ॥ ೧೮ ॥

ಲಾಭವು ಅಲಾಭವು । ಲಭಿಪ ಪೂಜಾಪೂಜವು ।
ಈ ಬಗೆಯಲ್ಲಿರುವವು । ಇನ್ನೂ ಇಂಥ ದ್ವಂದ್ವವು ॥ ೧೯ ॥

ಸುಖವು ದುಃಖ ಎರಡಿದು । ಸೀತ ಹಾಗೆ ಉಷ್ಣವು ।
ಸಖಿಗಳಂತೆ ದ್ವಂದ್ವವು । ಶ್ವಾನೆ ಉಂಟು ಇಂಥವು ॥ ೨೦ ॥

ಇಂತು ಮೋಹಪಾಶವು । ಎನ್ನ ಬಂಧಿಸಿರುವವು ।
ಎಂತು ಹರಿದು ಹೋಗ್ಯಾವು? ಎಂದಿಗಿವು ಮುಗಿಯೋವು? ॥ ೨೧ ॥

ತಗಲಿ ತಾನು ಬಲೆದುದು । ತಮವು ಬಂದು ಕವಿದುದು ।
ಹಗಲೂ ಹೊಲಬು ತೋರದು । ಹಾಗೆ ಯತ್ನ ಮರೆದುದು ॥ ೨೨ ॥

ನನ್ನ ನಾನು ಕಾಣದೆ । ನೊಂದೆ ನಿನ್ನ ನೆನೆಸದೆ ।
ನಿನ್ನ ಸೇನೆ ತೋರಿದೆ । ನೀಡಿ ತನುವ ನಮಿಸಿದೆ ॥ ೨೩ ॥

ಇಂತು ನಾನು ಎರಗಿದೆ । ಕಂತುಪಿತಸೆ ಎತ್ತಿದೆ ।
ಇಂತು ಮನದಿಂ ತೊಲಗದೆ । ಸಂತವಿಡು ಸೇರಿದೆ ॥ ೨೪ ॥

ತಿರುಪತೀಶ ಭಕ್ತರ । ಪೊರೆವೆ ನಿನ್ನ ಸಾರ್ದರ ।
ನೆರವೀಯುವ ಸುಜನರ । ಸರಸಿಜಕ್ಕೆ ಭಾಸ್ಕರ ॥ ೨೫ ॥

# ತನ್ನ ನಿಜವನ್ನು ಕಾಣುವ ಯೋಗ

**ಧನಾಸರಿ** **ಆದಿತಾಳ**

ಯೋಗಿಗೆ ನಿಜವದು ತೋರುತಿದ್ಯಣ್ಣ ।
ಯೋಗಿಗೆ ನಿಜವದು ತೋರುತಿದೆ ॥ ಪ ॥

ಕಾಮಾದಿಗಳವು ತೋರುವ ಕಾಲದಿ । ಕಾಮಾದಿಗಳನೆ ಕುರುಹಿಡುತ
ಕಾಮಾದಿಗಳವು ತೋರದ ಕಾಲದಿ । ತಾ ಮಾತ್ರವೆ ಇಹೆನೆಂದೆನುತ ।
ಸಾಮೋಪಾಯದಿ ಚೋರನ ಹಿಡಿವಂ । ತೀ ಮನದಾಗಮವನ್ನು ನಿರೀಕ್ಷಿಪ ॥ ೧ ॥

ವಾಸನೆಯೆಂಬ ಅರಣ್ಯದೊಳನುದಿನ । ವಾಸವ ಮಾಡುತಲಿರುತಿರುತ ।
ಆಶಾಪಾಶದೊಳನುದಿನ ತೊಳಲುತ । ನಾಶದ ಮಾರ್ಗವನರಸುತಿಹ ।
ಕೇಶನವೋಲಿಹ ಮನದ ಗುಣಂಗಳ । ಬೇಸರಿಸದೆ ಕುರುಹಿಡುತಲೆ ಇರುತಿಹ ॥ ೨ ॥

ವರಶಾಖೆಯಂ ಕುರುಹಿಡಲಾ ಹಿಮಕರ । ಸ್ಫುರಿಸುವಪ್ರೋಲೀ ಮಾನಸವ ।
ಕುರುಹಿಡಲಾಕ್ಷಣ ಸ್ಫುರಿಸುವ ಶಕ್ತಿಯೆ । ಪರತರ ತನ್ಮಯ ನಿಜವೆನುತ ।
ಗುರು ಚೆನ್ನಾರ್ಯರ ದಯದಿಂದರುಹಿದ । ಪರಮ ತಟಸ್ಥದ ಲಕ್ಷಣವರಿತಿಹ ॥
॥ ೩ ॥

## ಆತ್ಮನನ್ನು ಕಾಣದ ಕುರುಡನಿಗೆ ಉಪದೇಶ

ಕೈಯಲಿದ್ದವಸ್ತುವ ಕಣ್ಕುರುಡನಂತೆ ಕಾಣದೆ ನೀನಿಹರೆ ॥ ಪ ॥

ತನ್ನ ಮೈಯಲ್ಲಿದ್ದಾತ್ಮನ ನೆನೆಯಲರಿಯದೆ ॥ ಅ ಪ ॥

ಹಲಕಾಲವು ನಿನ್ನ ಕಾಮುಕತನಗಳ ಕಳೆಯಲಾರದಿಹರೆ ।
ಎಲುತೊಗಲು ಮಾಂಸಗಳಿಂದ ಕಲ್ಪಿತವಾದ ಕಾಯವ ನೀನೆಂಬರೆ ।
ಆಗಣಿತ ಶುಕ್ಲಶೋಣಿತಶ್ಲೇಷ್ಮ ದೇಹಕ್ಕೆ ಕುಲಗೋತ್ರವೆಂದೆಂಬರೆ ।
ನಿಲುಕಡೆಯಿಲ್ಲದನಿತ್ಯ ಶರೀರಕ್ಕೆ ನೀನೀಗ ಮರುಳಹರೆ ? ಅಯ್ಯಯ್ಯೊ ॥
॥ ೧ ॥

ಕರಣಂಗಳೆಂದೆಂಬ ಕಟುಕರೊಡನೆ ನೀನು ಕುರಿಯಂತೆ ತಿರುಗುವರೆ ।
ಪರಿಕಿಸಿದಾಶೆಯೆನಿಪಪಾಳ್ಬಾವಿಯೊಳ್ ಪಶುವಿನಂತೆ ಬೀಳ್ವರೆ ।
ಮರೆತುಕೊಂಡು ಮಾಯದ ಮಹಿಮೆ ಮಾನದುರ್ಮದಕೊಳಗಾಗುವರೆ ।
ನಿರುಕಿಸಿದರೆ ಇದರರ್ಥಗಳನರೆ ನಿಮಿಷಸುಖದೊಳಿಹರೆ ? ಅಯ್ಯಯ್ಯೊ ॥
॥ ೨ ॥

ಕೋಪದ್ವೇಷಂಗಳ ಕೊಳ್ಳೆಮಾಡದೆ ನೀನು ಕೋವಿದನೆಂದೆಂಬರೆ
ತಾಪತ್ರಯಂಗಳ ದಾಟಲಾರದೆ ಅನ್ಯದಾಸಭಾವದೊಳಿಹರೆ
ವ್ಯಾಪಕಾನಂದವ ಸಾಧಿಸಲರಿಯದೆ ವ್ಯಸನಕ್ಕೆ ಸಿಲುಕುವರೆ
ಗೋಪಾಲಾರ್ಯರ ಕೂಡಲರಿಯದೆ ಕುಶಲಿಗನೆಂದೆಂಬರೆ ? ಅಯ್ಯಯ್ಯೊ ॥
॥ ೩ ॥

# ಯಾರಿಗೆ ಸದ್ಗತಿ ಇಲ್ಲ?

ಇಲ್ಲ, ಇನ್ನಿಲ್ಲ ಇನ್ನಿಲ್ಲ। ॥ ಪ ॥
ತನ್ನ ತಾ ತಿಳಿಯದ ತಾಮಸನಿಗೆ ಗತಿ ॥ ಅ ಪ ॥

ಬಟ್ಟಲಂದದಿ ಕಂಗಳಿದ್ದು ವೇದ।
ಜುಟ್ಟೆಂಬಕ್ಷರ ಬೆಂಬಲವಿದ್ದು।
ದೃಷ್ಟಿಯೊಳಗೆ ದೃಕ್ಕುಗಳಿದ್ದು ಮುಂದೆ।
ಹುಟ್ಟಿನ ಬೀಜವ ಹುರಿಯದವಗೆ ಮುಕ್ತಿ ॥ ೧ ॥

ಧನ್ಯನಂತೆ ಪುಣ್ಯಫಲದಿಂದ ಬಹು।
ಉನ್ನತಯೋಗ ಬಂದುದರಿಂದ ॥
ತನ್ನ ತಾ ತಿಳಿದು ಗೆಲ್ಲುವದೆ ಚಂದ ಜ್ಞಾನ।
ವಿನ್ನ್ಯಾವ ಕಾಲಕೊ ಈ ಮಾನುಷ ದೇಹ ೨ ॥

ನಿಶ್ಚಿತವೇ ಮುಕ್ತಿದೇಶ ಬಹು।
ಕುತ್ಸಿತವೇ ಬಂದಿಹ ಪಾಶ? ॥
ನಿಶ್ಚಿಂತ ಶೇಷಾದ್ರಿ ವಾಸ ನಮ್ಮ।
ಹುಚ್ಚಾವಧೂತರ ಹೊಂದದವಗೆ ಗತಿ ॥ ೩ ॥

# ಕಂಬಳಿಹುಳುವಿನ ಹಂಬಲಿಕೆ

ಹುಳುಗಳ ರಾಜ್ಯದ ಹಳುವದಿ ಹರಿದಾಡುವ ಕಂಬಳಿಹುಳುವೊಂದು।
ಘಳಿಗೆಘಳಿಗೆಗೂ ಕನವರಿಸಿತು ರೆಕ್ಕೆಗಳು ಬೇಕು ಎಂದು ॥ ೧ ॥

ಬಳಿಯಣ ಹುಳುಹುಪ್ಪಟೆಗಳೆಲ್ಲವೂ ಕಿಲಕಿಲ ನಕ್ಕವು ಕೇಳಿ।
ಗೆಳೆಯಾ, ಹುಚ್ಚಿನ ಕನವರಿಕೆಯ ಬಿಡು ಮಲಗಿರು ಧೈರ್ಯವ ತಾಳಿ ॥ ೨ ॥

ಹುಳುವಿಗೆ ರೆಕ್ಕೆಯೆ? ತಿಳಿಗೇಡಿಯೆ, ಇದ ಕಲಿಸಿದರಾರೋ ನಿನಗೆ।
ಝಳಬಿಸಿಲೇರಿದೆ, ಬೆಪ್ಪೇ, ಬೇಗನೆ ಸುಳಿಯೆಲೊ ನಿನ್ನ ಮನೆಗೆ ॥ ೩ ॥

ಹುಳುಗಳು ರೆಕ್ಕೆಗೆ ಹಲುಬಲು ಪಾಪವು ಬಲಿವುದು ನೀ ಕೇಳೆಂದು ।
ತಿಳಿವಳಿಕೆಯು ಹೇಳಿತು ತಲೆಯಾಡಿಸಿ ಹುಳುಗಳ ಗೌಡನು ಬಂದು ॥ ೪ ॥

ನಗುವರ ಹಳಿವರ ಲೆಕ್ಕಿಸದಾ ಕಂಬಳಿಹುಳು ರೆಕ್ಕೆಯ ಬಯಸಿ ।
ಒಗುವಿಗೆ ಹಂಬಲಿಸಿತ್ತದು ಹಲಬರು ತಗದೆನ್ನಲು ಜಬ್ಬರಿಸಿ ॥ ೫ ॥

ಬಾಂದಳದಲಿ ಹಾರಾಡುವ ಜೀವವೃಂದವ ನಿಟ್ಟಿಸಿ ನೋಡಿ ।
ಒಂದಿನವೀಬಗೆಯಿಂದಲೆ ಹಾರುವೆನೆಂದಿತು ಹರಿಹರಿದಾಡಿ ೬ ॥

ಬುಳುಬುಳು ಹರಿದಾಡುವ ಡೊಂಕಿನ ಬರಿ ಬಳಲು ಮೈಯನೀಡಾಡಿ ।
ತಳುವದೆ ಹಾರಾಡುವೆನಾಗಸದೊಳು ತುಳ್ಕಲು ಹರ್ಷದ ಮೋಡಿ ॥ ೭ ॥

ತಟ್ಟನೆ ಒಂದಿನ ಹುಳುವಿಗೆ ಮೈ ಚುಮುಗುಟ್ಟಿತು ಬಲು ಚಳಿಯಿಂದ ।
ಕೆಟ್ಟ ನೋವುಗಳು ಸಾವನು ಕರೆದವು ಬೆಟ್ಟಿತಾಗಿ ಹಲಮುದ ॥ ೮ ॥

ದಿಟ್ಟಗಾರ ಕಂಬಳಿಹುಳುವೆಂದಿತು ಕಟ್ಟಿಕೊಂಡು ಮೈಸುಕ್ಕೆ ।
ಕಟ್ಟಕಡೆಯು ಮಾತಿದು ಸಟೆಯಾಗದು ಹುಟ್ಟುವುದೇ ದಿಟ ರೆಕ್ಕೆ ॥ ೯ ॥

ನೆಲದ ಮೇಲೆ ಒದ್ದಾಡುವ ಕಂಬಳಿಹುಳು ಹಂಬಲಿಕೆಯ ತೊಟ್ಟು ।
ಪಳುಕಿನ ರೆಕ್ಕೆಗಳಲಿ ಹಾರಾಡಿತು ನಂಬಿಕೆಯಲ್ಲಿದೆ ಗುಟ್ಟು ॥ ೧೦ ॥

ಛಲವನು ತೊಡು ನೀ ಬಿಡದಿರು ಭಕುತಿಯ ಗೆಲುವನು ಪಡಿಯುವೆ ಜೀವ ।
ಬಲಿತ ಭಾವ ಕತ್ತರಿಸಲು ಬಂಧವ ನೆಲೆ ನೀ ದೇವರ ದೇವ ॥ ೧೧ ॥

ಸಂಕಟಗಳು ನೂರಾರು ಬರಲಿ ಆತಂಕವನೊಡ್ಡಲಿ ಪಾಪ ।
ಶಂಕರ ನೀನೇ ದಿಟವಿದು ನಿನ್ನನು ಸೋಂಕದು ಸಂಸೃತಿತಾಪ ॥ ೧೨ ॥

## ಧ್ಯಾನವೊಂದೇ ಸಾಕು ಮುಕ್ತಿಗೆ

ಧ್ಯಾನವೊಂದೇ ಸಾಕು ಮುಕ್ತಿಗೆ । ನಿನಗೇನೂ ಬೇಡವೊ ಮೂಢಮನುಜನೆ ॥ ಪ ॥

ಹಠದಿಂದ ದೇಹವ ದಂಡಿಸಬೇಡ । ಕುಟಿಲಮಂತ್ರದಿ ಕೊರಗಾಡಲಿಬೇಡ ।
ಸಟೆಯ ಪ್ರಪಂಚವ ದಿಟವೆನ್ನಬೇಡ । ನಿಟಿಲಾಕ್ಷನಂಘ್ರಿಯ ಮರೆದಿರಬೇಡ ॥ ೧ ॥

ಕಾಯವನಿತ್ಯವು ನಂಬಲಿ ಬೇಡ । ನಾಯಂತೆ ಸಂಸಾರದಾಯಸಬೇಡ ।
ವಾಯುನಿಗ್ರಹದಿಂದ ಒಣಗಲಿ ಬೇಡ । ಬಾಯ ಬ್ರಹ್ಮವ ನೆಚ್ಚಿ ಬೆಳ್ಳಾಗಬೇಡ ॥ ೨ ॥

ಉಪವಾಸದಿಂ ದೇಹ ತಪಿಸಲಿ ಬೇಡ । ಕಪಿಯಂತೆ ಅಡವಿಯೊಳಡಿಯಾಡಬೇಡ ।
ಜಪತಪನೇಮದ ಆಯಾಸಬೇಡ । ಗುಪಿತ ನೀಲತೋಯದ ಮಧ್ಯಪ್ರಕಾಶದ ॥ ೩ ॥

ಆಗಮವೇದಂಗಳೋದಲಿಬೇಡ । ಯೋಗಸಾಧನೆಮಾಡುವಾಯಾಸಬೇಡ ।
ಶ್ರೀಗುರುನೇಮ ಉಲ್ಲಂಘಿಸಬೇಡ । ಭೋಗಭಾಗ್ಯವ ನಂಬಿ ದುಃಖಿಸಬೇಡ ॥ ೪ ॥

ಜಡೆಯ ಧರಿಸಿ ಜೋಗಿಯಾಗಿರಬೇಡ ॥ ನುಡಿಯ ತೊರೆದು ಬಕನಂತಿರಬೇಡ ।
ದೃಢವಿಡು ನಯನ ಜ್ಯೋತಿಯ ಬಿಡಬೇಡ । ಎಡರಡಸಲು ನೀ ಧೃತಿಗುಂದಬೇಡ ॥ ೫ ॥

ಬುದ್ಧಿಯ ವಿಷಯದಿ ಪೊದ್ದಿಸಬೇಡ । ಚಿದ್ರೂಪು ಚಿಂತೆಯ ಮರೆತಿರಬೇಡ ।
ನಿದ್ರಾ ಆಲಸ್ಯದ ಆಧಿಕ್ಯಬೇಡ । ಶುದ್ಧನೀಲತೋಯದ ಮಧ್ಯ ಪ್ರಕಾಶದ ॥ ೬ ॥

ಲಕ್ಷ್ಯದಿಂ ಚಿತ್ತವ ಚದುರಿಸಬೇಡ । ಸೂಕ್ಷ್ಮಬಿಂದುವ ಬಿಟ್ಟು ಸುಳಿದಾಡಬೇಡ ।
ಮೋಕ್ಷಕ್ಕಿನ್ನೊಂದು ಪ್ರಯತ್ನವು ಬೇಡ । ಸಾಕ್ಷಾಚ್ಚೆನ್ನಾರ್ಯರ ಪದವಗಲದ ಲಕ್ಷ್ಯದ ॥ ೭ ॥

## ಬ್ರಹ್ಮವಿದ್ಯೆಯು ಹೆಚ್ಚುಗಾರಿಕೆ

ಕಾಕುಪೋಕು ವಿದ್ಯೆಗಳನೇಕವಿದ್ದರೇನು ಜನ್ಮ ।
ಶೋಕವನು ನೀಗಿ ಮೋಕ್ಷದೇಕಾನಂದವೀಯವಿಂತೀ ॥ ಪ ॥

ವೇದಾಗಮ ಪುರಾಣಾದಿ ಗಾಥೆ ಶಬ್ದ ಶಾಸ್ತ್ರಮಂತ್ರ
ಭೇದ ಕಾವ್ಯ ತರ್ಕ ಮೀಮಾಂಸಾದಿ ದಂಭವಿದ್ಯವ ।
ಹಾದಿಹೋಕರಲ್ಲಿ ಇಲ್ಲಿ ಓದಿ ದೈನ್ಯತೋರಿ ತಮ್ಮ ।
ಕಾದಹೊಟ್ಟೆಗನ್ನವ ಸಂಪಾದಿಸುವರಲ್ಲದಿಂತೀ ॥ ೧ ॥

ಜ್ಯೋತಿಷ ಛಂದಸ್ಸು ವಾಸ್ತು ವೈದ್ಯ ಗಾರುಡ ಸಂ ।
ಗೀತ ನಾಟ್ಯ ಸಾಮುದ್ರಿಕ ಭೂತಾದ್ಯಲ್ಪವಿದ್ಯವ ॥
ನೋತು ಕಲ್ತುರೆಲ್ಲ ತೂತುಮಾತ ಮುಂದುಮಾಡಿ ದೃಶ್ಯ ।
ಜಾತವನ್ನೆ ಹೇಳಿ ಮಾಯಾದೂತರಪ್ಪರಲ್ಲದಿಂತೀ ॥ ೨ ॥

ವಾದ ವಶ್ಯಾಕರ್ಷಣೋರ್ವಿಭೇದವಾಕಾಶಾಂಬುಯಾನ ।
ಪಾದುಕಾಂಜನಾದಿ ಕ್ಷುದ್ರವೋದವಿದ್ಯಾವಂತರು ॥
ಕಾದಿ ಕಣ್ಣುಗೆಟ್ಟು ಕಲ್ಲ ಹಾದು ಸತ್ತು ಮುಂದೆ ಕಾಲ ।
ಬಾಧೆಯಲ್ಲಿ ನೊಂದು ಬೆಂದು ಬೂದಿಯಪ್ಪರಲ್ಲದಿಂತೀ ॥ ೩ ॥

ಬಂಧ ಲಕ್ಷ್ಯ ಮುದ್ರೆ ನಾಡೀ ಕಂದ ಚಕ್ರತಾರೆ ನಾದ ।
ಬಿಂದುಮಂಡಲಾದಿಯೋಗದಂಡವಿದ್ಯಾನಿಷ್ಠರು ॥
ಅಂದು ಇಂದು ತೋರಿತೆಂದಾನಂದಿಸುತ್ತ ಪೂರ್ಣಭಾವ ।
ದಂದಗೆಟ್ಟ ಜ್ಞಾನವನ್ನು ತಿಂದು ತೇಗುವರಲ್ಲದಿಂತೀ ॥ ೪ ॥

ವೇದಾಗಮ ಜ್ಯೋತಿಶ್ಛಂದೋವಾದವಶ್ಯ ಬಂಧ ಲಕ್ಷ್ಯ
ವಾದಿಯಾದ ವಿದ್ಯವೆಲ್ಲ ಭೇದಮಾರ್ಗವೆನ್ನುತ ॥
ಅನಾದಿ ಶ್ರೀ ಗುರುಸಿದ್ಧ ನಿನ್ನ ಬೋಧಿಸುತ್ತದ್ವೈತರೂಪ ।
ವಾದ ಮುಕ್ತಿಸೌಖ್ಯವೀವ ವೇದಾಂತವೊಂದಲ್ಲದಿಂತೀ ॥ ೫ ॥

## ಜ್ಞಪ್ತಿಚಿದ್ದ್ವಯಲನ್ನೆ ಸೇರು ಕಂಡ್ಯ

ಜ್ಞಪ್ತಿಚಿದ್ದ್ವಯಲನ್ನೆ ಸೇರು ಕಂಡ್ಯ ।
ಶುದ್ಧಜ್ಞಪ್ತಿಯು ತಾನಾಗೆ ಮುಕ್ತಿ ಕಂಡ್ಯ ಪ ॥

ಶಬ್ದವೆಂಬುದೆಲ್ಲ ಪ್ರಣವ ಕಂಡ್ಯ । ಆ ಪ್ರಣವವ ಕರ್ಣದಿ ಕೇಳು ಕಂಡ್ಯ ।
ಶಬ್ದಕ್ಕೆ ಸಾಕ್ಷಿ ನೀನಾಗು ಕಂಡ್ಯ । ನಿಶ್ಶಬ್ದಬ್ರಹ್ಮವೆ ಆಗಿ ನಿಲ್ಲು ಕಂಡ್ಯ ॥ ೧ ॥

ಜೀವಪರಮರಿಬ್ಬರಿಲ್ಲ ಕಂಡ್ಯ । ನಿರ್ಜೀವನೊಳಗೆ ಜೀವ ಭ್ರಾಂತು ಕಂಡ್ಯ ।
ಜೀವಪರಮರಿಗೈಕ್ಯ ಸುಳ್ಳು ಕಂಡ್ಯ । ಬೇರೆ ಜೀವ ಸುಳ್ಳೆಂಬುದೆ ಐಕ್ಯ ಕಂಡ್ಯ ॥ ೨ ॥

ಆಕಾರನಾಮವು ಸ್ವಪ್ನ ಕಂಡ್ಯ । ನಿರಾಕಾರವಸ್ತುವು ನೀನೆ ಕಂಡ್ಯ ।
ಲೋಕನಿನ್ನೊಳಗೆ ಕಲ್ಪಿತವು ಕಂಡ್ಯ । ಜಗದೇಕಸ್ವರೂಪವು ನೀನೆ ಕಂಡ್ಯ ॥ ೩ ॥

ಮರ್ತ್ಯಜನರ ದೇಹ ಮಾಯೆ ಕಂಡ್ಯ । ಗುರುಸತ್ತುಚಿತ್ತಾನಂದ ನೀನೆ ಕಂಡ್ಯ ।
ವೃತ್ತಿಯೆಂಬುವದೆಲ್ಲ ಮಿಥ್ಯ ಕಂಡ್ಯ । ನಿವೃತ್ತಿಸ್ವರೂಪನು ನೀನೆ ಕಂಡ್ಯ ॥ ೪ ॥

ವೇದಾಂತವೇದ್ಯನು ನೀನೆ ಕಂಡ್ಯ । ಯೋಗಸಾಧನೆಯೆಂಬುದು ಭ್ರಾಂತು ಕಂಡ್ಯ ।
ಬೋಧಸದ್ಗುರುಚಿನ್ನ ನೀನೆ ಕಂಡ್ಯ । ವಾದಭೇದಕೆ ನೀನು ವಿದೂರ ಕಂಡ್ಯ ॥ ೫ ॥

## ರಾಮ ರಾಮ ಎನ್ನಿರಿ

ರಾಮ ರಾಮ ರಾಮ ಸೀತಾರಾಮ ರಾಮ ಎನ್ನಿರಿ
ರಾಮಸ್ಮರಣೆಯ ಹೊರತು ಕಾಲವ ವ್ಯರ್ಥ ಕಳೆಯಬೇಡಿರಿ ॥ ೧ ॥

ಸ್ನಾನಸಂಧ್ಯಾನಿತ್ಯನೇಮ ಜಪವ ತಪವ ಮಾಡಿರಿ ।
ಸಾಯೊ ಸಂಕಟ ಬಂದರೂ ಪರಧರ್ಮ ಹಿಡಿಯಬೇಡಿರಿ ॥ ೨ ॥

ತಂದೆತಾಯಿ ಹೆಂಡ್ರುಮಕ್ಕಳು ಮಿಥ್ಯವೆಂದು ಅರಿಯಿರಿ ।
ನಂದು ನಾನೆಂದೆಂಬ ಮೋಹವ ಬಿಟ್ಟು ರಾಮನ ಭಜಿಸಿರಿ ॥ ೩ ॥

ಪರರ ನಾರಿ ಪರರ ದ್ರವ್ಯ ನರಕವೆಂದು ತಿಳಿಯಿರಿ ।
ಕಾಮಕ್ರೋಧಮೋಹ ಬಿಟ್ಟು ಮನಸು ಝಳಝಳ ಮಾಡಿರಿ ॥ ೪ ॥

ಭಕ್ತಿಭಾವದಿಂದ ಸದ್ಗುರು ಹರಿಯು ಹರನೆಂದರಿಯಿರಿ ।
ಗುರುವಿನಪ್ಪಣೆಯಂತೆ ನಡೆದರೆ ಮುಕ್ತಿಯೆಂದೂ ನಂಬಿರಿ ॥ ೫ ॥

ದಿವಸರಾತ್ರಿ ಸಾಧುಸಂತರ ಸಂಗವನ್ನು ಬಯಸಿರಿ ।
ಬ್ರಹ್ಮಾನಂದ ಸಾರಿ ಹೇಳುವ ರಾಮನಾಮವ ಜಪಿಸಿರಿ ॥ ೬ ॥

## ವಿಠ್ಠಲ ನಮ್ಮ ಸ್ವಾಮಿ

ವಿಠ್ಠಲ ನಮ್ಮ ಸ್ವಾಮಿ । ವಿಠ್ಠಲ ಸರ್ವಾಂತರ್ಯಾಮಿ ॥ ಪ ॥

ಎಡಕೂ ವಿಠ್ಠಲ ಬಲಕೂ ವಿಠ್ಠಲ । ಎಡಕೂ ಬಲಕೂ ವಿಠ್ಠಲ ॥ ೧ ॥

ಹಿಂದೂ ವಿಠ್ಠಲ ಮುಂದೂ ವಿಠ್ಠಲ । ಹಿಂದೂಮುಂದೂ ವಿಠ್ಠಲ ॥ ೨ ॥

ಕೆಳಗೂ ವಿಠ್ಠಲ ಮೇಲೂ ವಿಠ್ಠಲ । ಕೆಳಗೂಮೇಲೂ ವಿಠ್ಠಲ ॥ ೩ ॥

ಅಲ್ಲೂ ವಿಠ್ಠಲ ಇಲ್ಲೂ ವಿಠ್ಠಲ । ಎಲ್ಲೆಲ್ಲಿಯೂ ವಿಠ್ಠಲ ॥ ೪ ॥

## ದೇವನನ್ನೆ ಕಂಡೆ

ಸಂತೆಯಲ್ಲೇಕಾಂತದಲ್ಲಿ ದೇವನನ್ನೆ ಕಂಡೆ ।
ಬಯಲಿನಲ್ಲಿ ಬೆಟ್ಟದಲ್ಲಿ ದೇವನನ್ನೆ ಕಂಡೆ ॥

ಬಳಿಯೊಳವನ ಕಂಡೆ ನಾನು ಬಹಳ ದುಃಖದಲ್ಲಿ ।
ಸುಖದ ಸೌಭಾಗ್ಯದಲ್ಲಿ ದೇವನನ್ನೆ ಕಂಡೆ ।
ಭಜನೆಯಲ್ಲುಪವಾಸದಲ್ಲಿ ಸ್ತೋತ್ರದಲ್ಲಿ ಯಾಗದಲ್ಲಿ ।
ಪೈಗಂಬರನ ಧರ್ಮದಲ್ಲಿ ದೇವನನ್ನೆ ಕಂಡೆ

ಜೀವನಿಲ್ಲ ದೇಹವಿಲ್ಲ ದ್ರವ್ಯವಿಲ್ಲ ಗುಣಗಳಿಲ್ಲ ।
ಕಾರ್ಯಕಾರಣಗಳಿಲ್ಲ ದೇವನನ್ನೆ ಕಂಡೆ ॥
ಮೇಣಬತ್ತಿಯಂತೆ ಕರಗಿಹೋದೆನವನ ಶೋಖದಲ್ಲಿ
ಉರಿವ ಬೆಂಕಿಭುಗಿಲಿನಲ್ಲಿ ದೇವನನ್ನೆ ಕಂಡೆ ॥

ನನ್ನ ಕಣ್ಣಿನಿಂದ ನೋಡೆ ನನ್ನ ನಾನೆ ಸಿಜದಿ ಕಂಡೆ ।
ದಿವ್ಯದೃಷ್ಟಿಯಿಂದ ನೋಡೆ ದೇವನನ್ನೆ ಕಂಡೆ ॥
ಏನು ಇಲ್ಲವಾದೆ ಸತ್ತು ಕಣ್ಗೆ ಕಾಣದಾದೆ ॥
ಏನ ಹೇಳ್ವೆನಮರನಾದೆ ದೇವನನ್ನೆ ಕಂಡೆ ॥



ಶ್ರೀಶ್ರೀಗಳವರು ಪೂರ್ವಾಶ್ರಮದಲ್ಲಿ ರಚಿಸಿದ ಈ ಕೃತಿಯನ್ನು ಸ್ಥಳಾಭಾವದಿಂದ ತುದಿಯಲ್ಲಿ ಸೇರಿಸಿರುವೆವು.

## ಮಂಗಲ ಮಂಗಲವೆನ್ನಿ

**ಸುರಟಿ** — **ಛಾಪು**

ಮಂಗಲ ಮಂಗಲ ಮಂಗಲವೆನ್ನಿ ||ಪ||

ದೇವರ ದೇವಗೆ ಕಾವಗೆ ಭವಗೆ |
ಭಾವಜಹರ ಮಹಾದೇವಗೆ ಶಿವಗೆ
ಭಾವಗೆ ಸಾಕ್ಷಿಯಾದಾ ಮಹಾಭಾವಗೆ |
ಜೀವರ ಜೀವನಿಗಾ ಉಮಾಧವಗೆ ||೧||

ಮಿಂಚಿನಂದದಿ ತೋರಿ ಮೈಗರೆವವಗೆ |
ಚಂಚಲ ಮನದ ವೇಗವನರಿವವಗೆ |
ಸಂಚಿತ ಪಾಪವನುರುಹುವ ಮೈಮೆಯ |
ಪಂಚಾನನಗಭಿವಾಂಛಿತಪ್ರದಗೆ ||೨||

ವೇದವೇದಾಂಗ ವಿಜ್ಞಾನಲೋಲನಿಗೆ |
ಸಾಧಿತ ಕರ್ಮತಪಸ್ವಿಖೇಲನಿಗೆ |
ಬಾಧರಹಿತ ಶಮದಮ ಸತ್ಯೋಕ್ತ್ರಸ |
ಸಮಾಧಿನಿಷ್ಠ ಸುಲಭಗೆ । ಶಂಕರಗೆ ||೩||



# ವಿಷಯಾನುಕ್ರಮಣಿಕೆ

# ವಿಷಯಾನುಕ್ರಮಣಿಕೆ

# ವಿಷಯಾನುಕ್ರಮಣಿಕೆ

ಪುಟ



